P 14

ವನಿತೆಯರಿಗಾಗಿಯೇ ಮೀಸಲಾದ ವಿಶಿಷ್ಟ ಮಾಸ ಪತ್ರಿಕೆ

# ವನಿತಾ

July 84 (14)

* ದಿನ ನಿತ್ಯದ ಆಗುಹೋಗುಗಳ ಬಗ್ಗೆ ಸ್ತ್ರೀಯರ ಅಭಿಪ್ರಾಯ ವ್ಯಕ್ತಪಡಿಸಲು ವೇದಿಕೆ
* ದೇಹ ಸೌಂದರ್ಯ ಕಾಪಾಡಿಕೊಳ್ಳಲು ಮಾರ್ಗದರ್ಶನ
* ಮಹಿಳೆಯರಿಗೇ ವಿಶಿಷ್ಟವಾದ ದೈಹಿಕ ಆರೋಗ್ಯ ರಕ್ಷಣೆಯ ವಿಧಿ ವಿಧಾನಗಳು
* ಮಾನಸಿಕವಾಗಿ ಒತ್ತಡಕ್ಕೊಳಗಾದ ಮಹಿಳೆಯರಿಗೆ ನೆಮ್ಮದಿಯ ಸೂತ್ರಗಳು
* ಮಕ್ಕಳ ಪಾಲನೆ ಪೋಷಣೆ ಕುರಿತಾದ ಬರಹಗಳು
* ಪುಣ್ಯಕ್ಷೇತ್ರ ಪರಿಚಯಗಳು
* ಕುಟುಂಬ ಹಾಗೂ ಸಮಾಜದಲ್ಲಿ ಮಹಿಳೆಯರ ಪಾತ್ರದ ಸಮಗ್ರ ಚಿತ್ರಣ
* ಸ್ತ್ರೀಯರ ಆಲೋಚನೆಗಳನ್ನನುಸರಿಸಿ ಮಹಿಳೆಯರೇ ಬರೆದ ಕಥೆಗಳು
* ಬಿಡುವಿನ ವೇಳೆಯಲ್ಲಿ ಸುಲಭವಾಗಿ ಮಾಡಿಕೊಳ್ಳುವ ಉಪಯುಕ್ತ ಕಲಾಕೃತಿಗಳು
* ಹೆಸರಾಂತ ಲೇಖಕಿಯರ ಧಾರಾವಾಹಿ ಕಾದಂಬರಿಗಳು
* ಹೊಸರುಚಿ, ಸುಲಭ ಚಿಕಿತ್ಸೆಗಳು

ಇವಲ್ಲದೆ ವಿದ್ಯಾರ್ಥಿನಿಯರಿಗಾಗಿ ಸ್ಥಳಾವಕಾಶ, ಅರಳುವ ಪ್ರತಿಭೆ, ಪ್ರತಿಭಾವಂತರ ಪರಿಚಯ, ಕವನಗಳು ಸ್ವಾರಸ್ಯಲೋಕ, ಪುಸ್ತಕ ವಿಮರ್ಶೆ, ಮುಂತಾದುವುಗಳನ್ನೊಳಗೊಂಡು

**ತಿಂಗಳಿಗೊಮ್ಮೆ ಹೊರ ಬರುವ ವನಿತಾ ಕೇವಲ ಮಾಸಪತ್ರಿಕೆಯಷ್ಟೇ ಅಲ್ಲ, ಸಂಗ್ರಹಿಸಿಟ್ಟರೆ ಉಪಯುಕ್ತ ಗ್ರಂಥವೂ ಹೌದು.**

**ಸೊಗಸಾದ ನಿರೂಪಣೆ-ಅಚ್ಚುಕಟ್ಟಾದ ಮುದ್ರಣ**

**ಬಿಡಿ ಪ್ರತಿ ರೂ. ೨-೫೦**

ಹೆಚ್ಚಿನ ವಿವರಗಳಿಗೆ :

**ವಿ ಜ ಯಾ ಬು ಕ್ ಹೌ ಸ್**

ಚಂದಮಾಮ ಬಿಲ್ಡಿಂಗ್ಸ್, ವಡಪಳನಿ, ಮದರಾಸ್-೬೦೦ ೦೨೬



# ಚಂದಮಾಮ

ಜುಲೈ 1984

★

## ಈ ಸಂಚಿಕೆಯಲ್ಲಿ



★


ಬಿಡಿ ಪ್ರತಿ ರೂ. ೨.೦೦

ವಾರ್ಷಿಕ ಚಂದಾ ರೂ. ೨೪.೦೦

# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'
ಸಂಚಾಲಕರು : ನಾಗಿರೆಡ್ಡಿ

ವಿದ್ಯೆಗಳಲ್ಲಿ ಮೊತ್ತಮೊದಲು ಕಲಿಯಬೇಕಾದುದು ಓದು ಬರೆಹಗಳು. ಅನಂತರ ಕಲಿಯಲು ಎಷ್ಟೋ ವಿದ್ಯೆಗಳಿವೆ. ಶಾಸ್ತ್ರಗಳಿವೆ. ಯಾಂತ್ರಿಕ, ತಾಂತ್ರಿಕ, ವೈಜ್ಞಾನಿಕ ವಿಷಯಗಳಿವೆ. ಅಂತಹವುಗಳಲ್ಲಿ ಯಾವುದನ್ನು ಕಲಿಯಬೇಕಾದರೂ ಕೆಲವು ಸಾಧಾರಣ ಅರ್ಹತೆಗಳಿವೆ. ಅವುಗಳಲ್ಲಿ ಪ್ರಾಮಾಣಿಕತೆ ಬಹು ಮುಖ್ಯ. ಅದಿಲ್ಲದವನು ಯಾವ ವಿದ್ಯೆಯನ್ನೂ ಕಲಿಯಲು ಅರ್ಹನಲ್ಲ ಎಂಬ ವಿಷಯವನ್ನು ಸ್ಪಷ್ಟಪಡಿಸುತ್ತದೆ, "ಅರ್ಹತೆ" ಎಂಬ ಈ ಸಂಚಿಕೆಯಲ್ಲಿರುವ ಕಥೆ.

## ಅಮರವಾಣಿ

ಶಿರಸಾ ವಹನಂ ಧೃತ್ವಾ ಛಾಯಾಂ ಯಚ್ಛತಿ ಪಾದಪಃ
ಅನುಭೂಯ ಸ್ವಯಂ ಕಷ್ಟಂ ಸುಜನೋಽನ್ಯ ಸುಖಪ್ರದಃ

ಮರವು ತಲೆಯ ಮೇಲೆ ಉರಿಬಿಸಿಲನ್ನು ಹೊತ್ತುಕೊಂಡು ಇತರರಿಗೆ ತಣ್ಣೆಳಲನ್ನು ಕೊಡುತ್ತದೆ. ಅಂತೆಯೇ ಉತ್ತಮನು ತಾನು ಕಷ್ಟಗಳನ್ನು ಅನುಭವಿಸುತ್ತಿದ್ದರೂ ಪರರಿಗೆ ಮೇಲಾಗುವಂತೆಯೇ ನೋಡುವನು.

ಸಂಪುಟ: ೭೩. ಜುಲೈ '೮೪ ಸಂಚಿಕೆ: ೧

ಬಿಡಿ ಪ್ರತಿ ರೂ. ೨-೦೦ :: ವಾರ್ಷಿಕ ಚಂದಾ ರೂ. ೨೪-೦೦




SANKAR

# ಚಂದಮಾಮನ ಹರಟೆ



## ನಿದ್ದೆಯಿಂದ ಎಬ್ಬಿಸುವ ಮಾತ್ರೆಗಳು

ನಿದ್ರೆ ಬರಲು ಮಾತ್ರೆಗಳನ್ನು ನುಂಗುವರೆಂದು ಎಲ್ಲರಿಗೂ ಗೊತ್ತಿದೆ. ಈಗ ನಿರ್ಣಯಿಸಿದ ಸಮಯಕ್ಕೆ ನಿದ್ರೆಯಿಂದ ಎಬ್ಬಿಸಲು ಕೂಡಾ ಮಾತ್ರೆಗಳು ಬರಲಿವೆ ಎಂದು ಜರ್ಮನಿಯ ಸಂಶೋಧನೆಯ ಸಂಸ್ಥೆಯೊಂದು ತಿಳಿಯ ಪಡಿಸಿದೆ.

## ಸಿಂಹಗಳ ಕಾವಲು

ಇಟಲಿಯ ನೇಪುಲ್ಸ್‌ನ ಸಮೀಪದಲ್ಲಿರುವ ಚಿಕ್ಕದೊಂದು ಪಟ್ಟಣದಲ್ಲಿ ಒಬ್ಬ ವ್ಯಾಪಾರಸ್ಥನು ತನ್ನ ಅಂಗಡಿಗೆ ಅಪೂರ್ವವಾದ ರೀತಿಯಲ್ಲಿ, ತರುಣ ಸಿಂಹಗಳನ್ನು ಕಾವಲಿರಿಸಿದ್ದಾನೆ. ಅವನು ಸರ್ಕಸ್ ಕಂಪೆನಿಯಿಂದ ಎರಡು ಸಿಂಹದ ಮರಿಗಳನ್ನು ಸಂಪಾದಿಸಿ, ಅವುಗಳನ್ನು ಬಹಳ ಪ್ರೀತಿಯಿಂದ ಬೆಳೆಸಿದನು. ಅವು ಕೂಡಾ ಅವನ ಮೇಲೆಯೂ, ಸುತ್ತುಮುತ್ತಲಿನವರ ಮೇಲೆಯೂ ಪ್ರೇಮದಿಂದ ನಡೆದುಕೊಳ್ಳುತ್ತಿದ್ದುವು. ಆದರೂ ಪೋಲೀಸರು ಸಿಂಹದ ಕಾವಲಿನ ದೃಶ್ಯವನ್ನು ನೋಡಿ, ಆ ಎರಡು ಸಿಂಹಗಳನ್ನೂ ಪ್ರಾಣಿ ಪ್ರದರ್ಶನ ಶಾಲೆಗೆ ಒಪ್ಪಿಸಬೇಕೆಂದು ಆ ವ್ಯಾಪಾರಿಗೆ ತಾಕೀದು ಕಳುಹಿಸಿದರು.





## ಹೊಚ್ಚ ಹೊಸ ರಿಕಾರ್ಡು

ಪಶ್ಚಿಮ ಜರ್ಮನಿಯ ಹೆಸ್ಲಿಂಜರ್ ನಗರಕ್ಕೆ ಸೇರಿದ ಎಂಟುಮಂದಿ ವನಿತೆಯರು, ಎರಡುವರೆ ಮೀಟರುಗಳಷ್ಟು ಎತ್ತರದ ಬೀಳಲಿನಂತಹ ಸ್ತಂಭಗಳ ಮೇಲೆ ೧೨೨ ಗಂಟೆಗಳಷ್ಟು ಹೊತ್ತು ಕುಳಿತುಕೊಂಡು, ಆ ಕ್ರೀಡೆಯಲ್ಲಿ ಹೊಚ್ಚ ಹೊಸ ರಿಕಾರ್ಡು ಸೃಷ್ಟಿಸಿದ್ದಾರೆಂದು ಹೇಳುತ್ತಾರೆ.

## ನಿಮಗೆ ಗೊತ್ತೇ?

೧. ಟೆಲಿಫೋನ್ ಕಂಡು ಹಿಡಿದವನು ಯಾರು ?

೨. ಟೆಲಿಸ್ಕೋಪನ್ನು ರೂಪಿಸಿದ ಶಾಸ್ತ್ರವೇತ್ತನು ಯಾರು ?

೩. ಗ್ರಾಮಫೋನ್ ಸೃಷ್ಟಿಸಿದ ಶಾಸ್ತ್ರಜ್ಞನ ಹೆಸರೇನು ?

೪. ಲೌಡುಸ್ಪೀಕರನ್ನು ಕಂಡು ಹಿಡಿದವರ ಹೆಸರೇನು ?

೫. ಸ್ತೆತಸ್ಕೋಪನ್ನು ತಯಾರಿಸಿದ ಶಾಸ್ತ್ರವೇತ್ರನು ಯಾರೆಂದು ಗೊತ್ತೇ ?

(ಉತ್ತರ ೬೪ನೇ ಪುಟದಲ್ಲಿ)



# ಅರ್ಹತೆ

ಅನೇಕ ವರ್ಷಗಳ ಹಿಂದೆ ಕೋಸಲ ರಾಜಧಾನೀ ನಗರಕ್ಕೆ ಸಮೀಪದಲ್ಲಿ ಒಂದು ಆರಣ್ಯವಿದ್ದಿತು. ಅಲ್ಲಿ ವಿಮಲಾನಂದನೆಂಬ ಮುನಿ ಗುರುಕುಲವನ್ನು ನಡೆಸುತ್ತ ಲೋಕೋಪಕಾರ ಮಾಡುತ್ತಿದ್ದನು. ಅವನು ತಪಸ್ಸು ಮಾಡುತ್ತಿದ್ದರೂ, ಗುರುಕುಲವು ಚೆನ್ನಾಗಿ ನಡೆಯುವಂತೆ ನೋಡಿಕೊಳ್ಳುತ್ತಿದ್ದನು. ತರ್ಕ, ಮೀಮಾಂಸೆ, ವ್ಯಾಕರಣ, ಇಂದ್ರಜಾಲ ಮುಂತಾದ ಶಾಸ್ತ್ರಗಳಲ್ಲಿ ಉದ್ದಂಡರಾದ ಪಂಡಿತರನ್ನು ಗುರುಕುಲದಲ್ಲಿ ನಿಯಮಿಸಿಕೊಂಡಿದ್ದನು. ಇದು ರಾಜನ ಅನುಮತಿಯಿಂದಲೇ ನಡೆಯುವ ಗುರುಕುಲವಾದುದರಿಂದ ಅವರಿಗೆಲ್ಲ ಮಾಸಾಶನಗಳು ರಾಜನಿಂದಲೇ ಆಗಿಂದಾಗ ತಪ್ಪದೆ ಬರುತ್ತಿತ್ತು.

ಒಂದುಸಾರಿ ಆತನ ಗುರುಕುಲದಲ್ಲಿ ವಿದ್ಯಾಭ್ಯಾಸ ಮಾಡಲಿಕ್ಕಾಗಿ ನಗರದಿಂದ ಸುದಾಮ ಮತ್ತು ಮೋಹನ ಎಂಬ ಇಬ್ಬರು ಹುಡುಗರು ಹೊರಟು ಬಂದರು, ಅವರು ವಿಮಲಾನಂದನ ದರ್ಶನಮಾಡಿ ತಾವು ಬಂದ ಉದ್ದೇಶವನ್ನು ಕುರಿತು ಹೇಳಿಕೊಂಡರು.

ವಿಮಲಾನಂದನು ಅವರಿಗೆ ಕೆಲವು ದಿನ ತಾಳುವಂತೆ ವಸತಿಯನ್ನು ತೋರಿಸಿ, " ಮೊದಲು ನೀವಿಬ್ಬರೂ ಎಂತಹ ಶಾಸ್ತ್ರ ವಿದ್ಯೆಗೆ ಅರ್ಹತೆಯುಳ್ಳವರೆಂಬುದನ್ನು ತಿಳಿದುಕೊಳ್ಳ ಬೇಕಾಗಿದೆ. ಅದಕ್ಕೆ ಸ್ವಲ್ಪ ಕಾಲಾವಧಿ ಬೇಕು. ಅಪ್ಪುರಪರೆಗೆ ಗುರುಕುಲದ ನಿಯಮಗಳನ್ನು ಪಾಲಿಸಿಕೊಂಡು ಇಲ್ಲೇ ಇರಿ " ಎಂದನು.

ಒಂದು ವಾರ ದಿನಗಳು ಕಳೆದುವು. ಆ ದಿನ ಗುರುಕುಲಕ್ಕೆ ಅಗತ್ಯವಿರುವ ಕಟ್ಟಿಗೆ ತಂದು ಸೇರಿಸುವ ಕೆಲಸ ಸುದಾಮ, ಮೋಹನರ ಮೇಲೆ ಬಿತ್ತು. ಅವರು ಒಂದೊಂದು ಕೊಡಲಿ ಹಿಡಿದುಕೊಂಡು, ಕಾಡಿನೊಳಗೆ ಒಣಗಿದ ಮರವನ್ನು ಹುಡುಕುತ್ತಾ ಹೋದರು. ಬಹಳ ದೂರ ಹೋದ ಮೇಲೆ ಒಂದು ಒಣಕಲು ಮರವು ಕಂಡಿತು.

ಇಬ್ಬರೂ ಸೇರಿ ಆ ಮರವನ್ನು ಕಡಿದು ಉರುಳಿಸಿದರು. ಆಮೇಲೆ ಒಂದು ಕಡೆಯಲ್ಲಿ ಬುತ್ತಿ ತಿಂದು, ಸ್ವಲ್ಪ ವಿಶ್ರಾಂತಿ ತೆಗೆದುಕೊಂಡು, ಬಿದ್ದ ಮರವನ್ನು ತುಂಡು ತುಂಡು ಕಟ್ಟಿಗೆಗಳಾಗಿ ಮಾಡ ತೊಡಗಿದರು. ಆಗ ಅವರಿಗೆ ಮರದ .ಕಾಂಡದ ಮಧ್ಯದ ಪೊಟರೆಯೊಂದರೊಳಗೆ ಚಿನ್ನದ ನಾಣ್ಯಗಳ ಮೂಟೆಯೊಂದು ಕಂಡಿತು. ಅದನ್ನು ನೋಡಿದ ಕೂಡಲೇ ಮೋಹನನ

ಆರ್. ಜಿ. ಸಾಂಬ



ಕಣ್ಣು ಜಗಜಗ ಹೊಳೆಯಿತು. ಅವನು ಒಂದೆರಡು ಕ್ಷಣ ಆಲೋಚನೆ ಮಾಡಿ, "ಸುದಾಮಾ, ಈ ದಿನ ದಿಂದ ನಮ್ಮ ದಾರಿದ್ರ್ಯ ತೀರಿಹೋಯಿತು. ಈ ನಾಣ್ಯಗಳನ್ನು ಇಬ್ಬರೂ ಹಂಚಿಕೊಳ್ಳೋಣ. ಇದರಿಂದ ಒಳ್ಳೆಯ ಮನೆಯನ್ನೂ, ನೆಲವನ್ನೂ ಕೊಂಡಕೊಂಡು ಜೀವಿತ ಕಾಲವೆಲ್ಲಾ ಸೊಗಸಾಗಿ ಬದುಕಬಹುದು. ಈ ಕಾಡಿನಲ್ಲಿ ಕಷ್ಟಪಟ್ಟು ವಿದ್ಯೆ ಕಲಿಯುವ ಕಷ್ಟವೇಕೆ ? ಎಷ್ಟು ಓದಿಕೊಂಡರೂ ಹಣ ಸಂಪಾದಿಸಿ ಸುಖಪಡ ಬೇಕೆಂದು ತಾನೇ? ಈ ಹಣ ಎತ್ತಿಕೊಂಡು ಸೀದಾ ಮನೆಗೆ ಹೋಗೋಣ. ಗುರುಕುಲಕ್ಕೆ ಹೋಗುವ ಅಗತ್ಯವೇ ಇಲ್ಲ." ಎಂದನು.

ಸುದಾಮನು ಅವನ ಮಾತಿಗೆ ಇಷ್ಟವಿಲ್ಲದವನಂತೆ ತಲೆಯಾಡಿಸಿ, "ನಾವು ವಿದ್ಯೆ ಕಲಿಯಲಿಕ್ಕಾಗಿಯೇ ಇಲ್ಲಿಗೆ ಬಂದಿದ್ದೇವೆ. ಧನ ಸಂಪಾದನೆ ಮಾಡುವು ದೊಂದೇ ವಿದ್ಯೆ ಕಲಿಯುವುದರ ಅರ್ಥವಲ್ಲ. ಧನವನ್ನು ಸಂಪಾದಿಸಲು ಅನೇಕ ದಾರಿಗಳಿವೆ. ವಿದ್ಯೆ ಕಲಿಯ ದವರೂ ಸಹಾ ಧನವನ್ನು ಸಂಪಾದಿಸಿ ಬಿಡುತ್ತಾರೆ. ಧನವಿದ್ದ ಮಾತ್ರಕ್ಕೆ ವಿದ್ಯೆ ಕಲಿಯಲು ಸಾಧ್ಯವಾಗದು. ಆದರೆ ವಿದ್ಯೆಗಳಿದ್ದರೆ ಅದರಿಂದ ಧನವನ್ನೂ ಸಂಪಾದಿಸ ಬಹುದು. ಅದು ನ್ಯಾಯವಾದ ಸಂಪಾದನೆಯೂ ಆಗುತ್ತದೆ. ಧನವು ನಮಗೆ ತಿಳಿಯದೆಯೇ ನಮ್ಮನ್ನು ಬಿಟ್ಟು ಹೋಗಲೂಬಹುದು. ನಾವು ಕಲಿತ ವಿದ್ಯೆ ಮಾತ್ರ ಎಂದಿಗೂ ನಮ್ಮನ್ನು ಬಿಟ್ಟು ಹೋಗುವು ದಿಲ್ಲ. ಎಲ್ಲಾ ಧನಗಳಲ್ಲಿಯೂ ವಿದ್ಯಾಧನವೇ ಪ್ರಧಾನವೆಂದು ಹಿರಿಯರು ಹೇಳುತ್ತಾರಷ್ಟೆ ? ಗುರುಕುಲದ ನಿಯಮದ ಪ್ರಕಾರ ನಮಗೆ ಸಿಕ್ಕಿದ ಈ ಚಿನ್ನದ ನಾಣ್ಯಗಳನ್ನು ತೆಗೆದುಕೊಂಡು ಹೋಗಿ ಗುರುಗಳಿಗೇ ಕೊಟ್ಟುಬಿಡೋಣ. ಅದೇ ಒಳ್ಳೆಯದು" ಎಂದನು.

ಮೋಹನನಿಗೆ ಆ ಮಾತು ಸ್ವಲ್ಪವೂ ರುಚಿಸಲಿಲ್ಲ. ಅವನು ಆ ನಾಣ್ಯಗಳನ್ನು ಎಣಿಸಿ ಎರಡು ಭಾಗ ಮಾಡಿ, ಒಂದು ಭಾಗವನ್ನು ಸುದಾಮನಿಗೆ ಕೊಟ್ಟನು. ಆ ಮೇಲೆ ತನ್ನ ಭಾಗದ ನಾಣ್ಯಗಳನ್ನು ಅಂಗಿಯ ಜೇಬಿನೊಳಗೆ ಇಟ್ಟುಕೊಂಡು, "ನಾನು ಮನೆಗೆ ಹೋಗುತ್ತೇನೆ. ನೀನು ಬೇಕಾದರೆ ಗುರುಕುಲಕ್ಕೆ ಹೋಗಿ ನಿನ್ನ ಇಷ್ಟಪ್ರಕಾರ ವಿದ್ಯೆ ಕಲಿ, ನಾನೇನೂ ಬೇಡೆನ್ನುವುದಿಲ್ಲ. ಆದರೆ ನನ್ನ ವರ್ತನೆಯಲ್ಲಿ ಅನ್ಯಾಯ ವೇನೂ ನನಗೆ ಕಾಣುವುದಿಲ್ಲ" ಎಂದು ಸುದಾಮನಿಗೆ ಹೇಳಿ, ಮನೆಯ ದಾರಿ ಹಿಡಿದು ನಡೆದನು.

ದಾರಿಯಲ್ಲಿ ಅವನು ಒಂದು ಸಣ್ಣ ತೊರೆಯನ್ನು ದಾಟಬೇಕಾಗಿ ಬಂದಿತು. ಅದರಲ್ಲಿ ಇಳಿದು ನಾಲ್ಕು ಹೆಜ್ಜೆ ಹಾಕುವಷ್ಟರಲ್ಲಿ ಕಾಲಿಗೆ ಏನೋ ಸುತ್ತಿ ಕೊಂಡ ಹಾಗೆ ತೋರಿತು. ಮರುಕ್ಷಣದಲ್ಲಿ ಬಲ ಗಾಲಿನ ಪಾದದ ಗಂಟಿಗೆ ಚುರ್ರನೆ ಸೂಜಿಯಲ್ಲಿ ಚುಚ್ಚಿದಂತೆ ನೋವೆದ್ದಿತು.

ಮೋಹನನು ಭಯಕಂಪಿತನಾಗಿ ಗಟ್ಟಿಯಾಗಿ ಕಾಲನ್ನು ಝಾಡಿಸಿದನು. ಆಗ ಅವನ ಕಾಲಿಗೆ

ಸುತ್ತಿದ ಹಾವು ತೀರಕ್ಕೆ ಬಿದ್ದು ಬದಿಯಲ್ಲಿದ್ದ ಪೊದರಿನೊಳಗೆ ಸರಸರನೆ ಓಡಿಹೋಯಿತು.

ಹೆದರಿದ ಮೋಹನನು ತೀರದ ಮೇಲಕ್ಕೆ ಬಂದು ಕಾಲನ್ನು ಪರೀಕ್ಷಿಸಿ ನೋಡಿದನು. ಗಂಟಿನ ಕೆಳಗೆ ಹಾವಿನ ಹಲ್ಲು ಇಳಿದುದು ಸ್ಪಷ್ಟವಾಗಿ ಕಂಡಿತು. ಅದನ್ನು ನೋಡಿ ಅವನಿಗೆ ಪ್ರಾಣಭೀತಿ ಉಂಟಾಯಿತು. "ಅಯ್ಯೋ! ಹಾವು ಕಚ್ಚಿತೋ! ಸಹಾಯ! ಸಹಾಯ! ಸಾಯುತ್ತೇನಲ್ಲಾ!" ಎಂದು ಕೂಗುತ್ತ ತೊರೆಯ ಬದಿಯಲ್ಲಿಯೇ ಓಡಲು ತೊಡಗಿದನು.

ಮೋಹನನು ಹಾಗೆ ಸ್ವಲ್ಪ ದೂರ ಓದುವಷ್ಟರಲ್ಲಿ ಇದಿರಾಗಿ ಒಬ್ಬ ಆಟವಿಕ ಮನುಷ್ಯನು ಬರುತ್ತಿದ್ದನು. ಅವನನ್ನು ನೋಡಿ ಮೋಹನನು "ಅಯ್ಯಾ! ನನ್ನನ್ನು ಹಾವು ಕಚ್ಚಿತು. ನಿನ್ನ ಹತ್ತಿರ ಹಾವಿನ ಔಷಧವಿದ್ದರೆ ಕೊಡಪ್ಪಾ! ಕಾಪಾಡಪ್ಪಾ!" ಎಂದು ಆರ್ತನಾಗಿ ಕೇಳಿದನು. "ಓ! ಇದೆ, ಇದೆ! ಹಾವಿನ ಕಡಿತಕ್ಕೆ ಮದ್ದು ಕೊಡುವುದು ನನ್ನ ಮನೆತನದ ವೃತ್ತಿಯೇ ಆಗಿದೆ. ಮೊದಲು ನಿನ್ನ ಅಂಗಿ ಕಿಸೆಯೊಳಗಿರುವ ಚಿನ್ನದ ನಾಣ್ಯ ಪೂರಾ ನನಗೆ ಕೊಡು. ಗುಣವಾದ ಮೇಲೆ ನಿನ್ನನ್ನು ನಂಬುವುದು ಹೇಗೆ?" ಎಂದನು ಆಟವಿಕ.

ತನ್ನ ಅಂಗಿಯೊಳಗಿರುವ ಚಿನ್ನದ ನಾಣ್ಯಗಳ ಸಂಗತಿ ಇವನಿಗೆ ಹೇಗೆ ತಿಳಿಯಿತೋ ಎಂದು ಮೋಹನನಿಗೆ ಆಶ್ಚರ್ಯವಾಯಿತು. ಆಗಲೇ ಅವನಿಗೆ ತಾನು ಸಾಯುವ ಹಾಗೆ ಅನಿಸಿ, ಕಣ್ಣು ಕತ್ತಲೆ ಬರತೊಡಗಿತು. ಮೊದಲು ತನ್ನ ಪ್ರಾಣ ಕಾಪಾಡಿಕೊಳ್ಳುವುದು ಮುಖ್ಯವಾದ್ದರಿಂದ, ಅವನು ಮಾತಾಡದೆ ಚಿನ್ನದ ನಾಣ್ಯಗಳನ್ನು ತೆಗೆದು ಆಟವಿಕನಿಗೆ ಕೊಟ್ಟು "ಪ್ರಾಣವುಳಿಸೋ!" ಎಂದನು.

ಆಟವಿಕನು ಸಮೀಪದಲ್ಲಿದ್ದ ಪೊದರಿನ ಕಡೆಗೆ ಹೋಗಿ ಏನೇನೋ ಎಲೆಗಳನ್ನು ತಂದು ಅವುಗಳನ್ನು ಜಜ್ಜಿ ರಸ ತೆಗೆದು ಮೋಹನನ ಮೂಗು ಬಾಯಿಗಳಿಗೆ ಹಾಕಿ, ಗಾಯದ ಮೇಲೆ ತಿಕ್ಕಿ, ಮಂತ್ರ ಕೂಡಾ ಹೇಳಿ ಕೈಗಳನ್ನು ಝಾಡಿಸಿ ಒದರಿದನು.



ಆಮೇಲೆ ಮೋಹನನಿಗೆ ಹಾವು ಕಡಿದ ಅವಲಕ್ಷಣಗಳೆಲ್ಲಾ ಮಾಯವಾಗಿ ಹೋದುವು. ಆಟವಿಕನು ಸಣ್ಣಗೆ ನಗುತ್ತ, ಕಾಡಿನೊಳಗೆ ಹೊರಟು ಹೋದನು.

ಸಿಕ್ಕಿದ ಧನವು ಹೀಗೆ ಹೋದುದನ್ನು ನೋಡಿ ಮೋಹನನಿಗೆ ಬಹಳ ದುಃಖವಾಯಿತು. ಅವನು ಸ್ವಲ್ಪಹೊತ್ತು ಇದ್ದಲ್ಲೇ ಇದ್ದು ಆಲೋಚನೆ ಮಾಡಿ, ಹೇಗೂ ತಾನೀಗ ಮೊದಲಿನ ಸ್ಥಿತಿಗೇ ಬಂದುದರಿಂದ, ಗುರುಕುಲಕ್ಕೆ ಹೋಗಿ ವಿದ್ಯೆಯನ್ನೇ ಕಲಿಯೋಣವೆಂದುಕೊಂಡು, ಸ್ವಲ್ಪ ಕಟ್ಟಿಗೆ ಹೊರೆಯನ್ನೂ ಹೊತ್ತುಕೊಂಡು ಗುರುಕುಲಕ್ಕೇ ಹಿಂದಿರುಗಿದನು.

ಮೋಹನನನ್ನು ನೋಡಿದ ಕೂಡಲೇ ವಿಮಲಾನಂದ ಮುನಿ, "ಅಪ್ಪಾ, ಮೋಹನಾ! ನಿನಗೂ ಸುದಾಮನಿಗೂ ಗೊತ್ತಾಗದ ಹಾಗೆ ಚಿಕ್ಕದೊಂದು ಪರೀಕ್ಷೆ ಇಟ್ಟಿದ್ದೆ. ಅದರಲ್ಲಿ ಸುದಾಮನು ಗೆದ್ದಿದ್ದಾನೆ. ಅವನು ಇಲ್ಲಿ ವಿದ್ಯೆ ಕಲಿಯಲು ಬೇಕಾದ ಅರ್ಹತೆಯುಳ್ಳವನೆಂದು ನಿರೂಪಣವಾಯಿತು. ಅಂತಲೇ ಅವನನ್ನು ಗುರುಕುಲದಲ್ಲಿ ಸೇರಿಸಿಕೊಂಡಿದ್ದೇನೆ. ನೀನು ಯಾವ ಶಾಸ್ತ್ರ ವಿದ್ಯೆಯನ್ನು ಕಲಿಯಲಿಕ್ಕೂ ಅರ್ಹನಲ್ಲವೆಂದೂ ಗೊತ್ತಾಯಿತು. ನೀನು ಇಲ್ಲಿ ವಿದ್ಯೆ ಕಲಿಯಲು ಶ್ರಮಿಸುವುದು ವ್ಯರ್ಥ. ನಿನ್ನ ಮನೆಗೆ ಹೋಗಬಹುದು" ಎಂದನು.

ಅದನ್ನು ಕೇಳಿ ಮೋಹನನು ನಿರಾಶೆಯಿಂದ ತಲೆ ತಗ್ಗಿಸಿಕೊಂಡು ಅಲ್ಲಿಂದ ಹೊರಟನು. ಗುರುಕುಲದಿಂದ ಹೊರಗೆ ಹೋದಾಗ, ಮರಗಳ ಕೆಳಗೆ ತನಗೆ ಹಾವಿನ ಕಡಿತಕ್ಕೆ ಚಿಕಿತ್ಸೆ ಮಾಡಿದ ಆಟವಿಕನಿರುವುದು ಕಂಡಿತು.

ಅವನನ್ನು ನೋಡಿದ ಕೂಡಲೇ ಮೋಹನನಿಗೆ ಒಂದು ಸಂದೇಹವಾಯಿತು. ಅವನು ಅಲ್ಲಿರುವ ಒಬ್ಬ ವಿದ್ಯಾರ್ಥಿಯ ಹತ್ತಿರ ಹೋಗಿ, ಆ ಆಟವಿಕನಿಗೆ ಇಲ್ಲೇನು ಕೆಲಸವೆಂದು ಕೇಳಿದನು.

ಅದಕ್ಕೆ ಆ ವಿದ್ಯಾರ್ಥಿ "ಅವರು ಆಟವಿಕ ಮನುಷ್ಯರಲ್ಲ. ಇಷ್ಟವಿರುವ ವಿದ್ಯಾರ್ಥಿಗಳಿಗೆ ಐಂದ್ರಜಾಲಿಕವನ್ನು ಕಲಿಸುವ ಆಚಾರ್ಯರು. ಇವತ್ತು ಆಟವಿಕನ ವೇಷ ಹಾಕಿಕೊಂಡಿದ್ದಾರೆ" ಎಂದು ಹೇಳಿದನು.

ಆ ವಿದ್ಯಾರ್ಥಿಯ ಮಾತು ಕೇಳಿದ ಮೇಲೆ ಮೋಹನನು ಬಗ್ಗಿ ತನ್ನ ಪಾದದ ಗಂಟಿನ ಕೆಳಗೆ ಪರೀಕ್ಷಿಸಿ ನೋಡಿದನು. ಅಲ್ಲಿ ಹಾವು ಕಡಿದ ಗುರುತು ಇಲ್ಲವೇ ಇಲ್ಲ. ಈ ಆಚಾರ್ಯನು ಇಂದ್ರಜಾಲದಿಂದ ತನಗೆ ಹಾವು ಕಡಿದ ಭ್ರಮೆಯನ್ನುಂಟು ಮಾಡಿದ್ದನು. ವಿಮಲಾನಂದ ಮುನಿಯ ಪರೀಕ್ಷೆಯ ರೀತಿಗಳೂ ಈಗ ಚೆನ್ನಾಗಿ ಅವನಿಗೆ ಅರ್ಥವಾಗಿ ತುಂಬ ಪಶ್ಚಾತ್ತಾಪವಾಯಿತು.






# ಕನಕಸುಂದರಿ

ಪಟ್ಟುಬಿಡದ ಬೇತಾಳವನ್ನು, ತೊಟ್ಟ ಕಾರ್ಯ ಕಡೆ ಮುಟ್ಟಿಸಲೇಬೇಕೆಂಬ ರಾಜಾ ತ್ರಿವಿಕ್ರಮನು, ಬಿಡದೆ ಹಿಂದಿರುಗಿ ಬಂದು, ಮರದ ಕೊಂಬೆಯಲ್ಲಿ ನೇತಾಡುವ ಶವವನ್ನು ಕೆಳಗಿಳಿಸಿ ತನ್ನ ಹೆಗಲ ಮೇಲೆ ಹಾಕಿಕೊಂಡು ಸ್ಮಶಾನದ ಕಡೆಗೆ ನಡೆಯ ತೊಡಗಿದನು. ಆಗ ಶವದೊಳಗಿನ ಬೇತಾಳವು ಮಾತಾಡಲು ತೊಡಗಿ, “ಓ ಮಹಾರಾಜನೇ! ಇಷ್ಟೊಂದು ರಾತ್ರಿಯಲ್ಲಿ ಬಹಳ ಹಟದಿಂದ ನೀನು ಪಡುವ ಕಷ್ಟ ನೋಡುತ್ತಾ ಇರುವಾಗ, ಇದೆಲ್ಲಾ ಧರ್ಮ ಬುದ್ಧಿಯಿಂದ ಮತ್ತಾರಿಗೋ ಮಾಡುವ ಕೆಲಸವಲ್ಲ ವೆಂದೂ, ನಿನ್ನ ಸ್ವಂತದ ಒಳಿತಿಗಾಗಿಯೇ ಮಾಡುವಿ ಯೇನೋ ಎಂದೂ ನನಗೆ ಅನುಮಾನವಾಗುತ್ತದೆ. ಆದರೆ ಒಂದೊಂದುಸಲ ಪರಿಸ್ಥಿತಿಗಳು ಅನುಕೂಲ ವಾಗದೇ ಹೋದರೆ ಮನುಷ್ಯರು ತಮ್ಮ ಹಟವನ್ನು ಬಿಟ್ಟು, ಪ್ರಾಣಭೀತಿಯಿಂದ ತಮ್ಮನ್ನು ದ್ವೇಷಿಸು ವವರಿಗೆ ಬಾಗಿ ಹೋಗುತ್ತಾರೆ. ಇದಕ್ಕೆ ಉದಾಹರಣೆ ಯಾಗಿ ಕನಕಸುಂದರಿ ಎಂಬ ರಾಜಕುಮಾರಿಯ ಕಥೆ ಯನ್ನು ಹೇಳುತ್ತೇನೆ. ಶ್ರಮ ತಿಳಿಯದಂತೆ ಕೇಳುತ್ತಾ ನಡೆ” ಎಂದು ಹೀಗೆ ಕಥೆಯನ್ನು ಪ್ರಾರಂಭಿಸಿತು:

ಬೇತಾಳಕಥೆಗಳು?...



ಜಸ್ವಂತ ರಾಜ್ಯವನ್ನು ಕುಲದೀಪನೆಂಬ ರಾಜನು ಅನೇಕ ವರ್ಷಗಳಿಂದ ಪ್ರಜಾನುರಂಜಕನಾಗಿ ಪಾಲಿಸಿಕೊಂಡಿದ್ದನು, ಅವನ ಹತ್ತಿರ ಸುಕೀರ್ತಿ ಎಂಬೊಬ್ಬ ಮಂತ್ರಿ ಇದ್ದನು. ಅವನು ಬಹಳ ಸೂಕ್ಷ್ಮ ಬುದ್ಧಿಯುಳ್ಳ ಮಂತ್ರಿ. ಕುಲದೀಪನಿಗೆ ರಾಜಕಾರ್ಯಗಳಲ್ಲಿ ಅಗತ್ಯವಾದ ಸಲಹೆಗಳನ್ನು ಸುಕೀರ್ತಿಯೇ ಕೊಡುತ್ತಿದ್ದನು. ಅದರಿಂದ ಒಳ್ಳೆಯದೇ ಆಗುವುದರಿಂದ, ಸುಕೀರ್ತಿಯ ಸಲಹೆಗಳ ಮೇಲೆ ಕುಲದೀಪನಿಗೆ. ಅಚಲವಾದ ನಂಬುಗೆ ಇದ್ದಿತು.

ಮಹಾರಾಜ ಕುಲದೀಪನು ತುಂಬಾ ವೃದ್ಧನಾದನು. ಆ ಸ್ಥಿತಿಯಲ್ಲಿ ಅವನಿಗೆ ತೀವ್ರವಾದ ಕಾಯಿಲೆ ಬಂದಿತು. ಈ ಕಾಯಿಲೆ ತನ್ನ ಅಂತಿಮಕ್ಕೇ ಬಂದಿತೆಂದು ತಿಳಿದ ರಾಜನು, ತನ್ನ ಕುಮಾರ ಮಣಿದೀಪನಿಗೆ ಪಟ್ಟಾಭಿಷೇಕ ಮಾಡಿದನು. ಅಮೇಲೆ ಅವನು ಸಾಯುವ ಮೊದಲು ತನ್ನ ಮಗನೊಂದಿಗೆ, "ಅಪ್ಪಾ, ನಮ್ಮ ಮಂತ್ರಿ ಸುಕೀರ್ತಿಯ ಸಲಹೆ ತೆಗೆದುಕೊಳ್ಳದೆ ಯಾವ ನಿರ್ಣಯವನ್ನೂ ತೆಗೆದುಕೊಳ್ಳಬೇಡ. ಅವನು ತುಂಬಾ ದೂರಾಲೋಚನೆಯುಳ್ಳವನು. ರಾಜ ಕಾರ್ಯ ನಿರ್ವಹಣೆಯಲ್ಲಿ ನನಗಿಂತಲೂ ಅವನೇ ಹೆಚ್ಚಿನ ಅನುಭವಶಾಲಿ, ಅವನು ಬೇಡವೆಂದ ಕೆಲಸ ಮಾತ್ರ ಮಾಡಲೇ ಬೇಡ" ಎಂದು ಹೇಳಿ ತೀರಿಹೋದನು.

ಮಣಿದೀಪನು ತಂದೆಗೆ ಕೊಟ್ಟ ಮಾತಿನ ಪ್ರಕಾರ ವೃದ್ಧನಾದ ಸುಕೀರ್ತಿಯನ್ನೇ ತನಗೂ ಮಂತ್ರಿಯಾಗಿ ನಿಯಮಿಸಿಕೊಂಡನು.

ಒಂದು ಸಾರಿ ಮಣಿದೀಪನು ತನ್ನ ನೆರೆಯ ರಾಜನಾದ ಜಯಪಾಲನನ್ನು ಕುರಿತು ಮಂತ್ರಿ ಸುಕೀರ್ತಿಯೊಂದಿಗೆ ಮಾತಾಡುತ್ತ, "ಆ ಜಯಪಾಲ ರಾಜನು ಕ್ರಮಕ್ರಮವಾಗಿ ಬಲಿಷ್ಠನಾಗುತ್ತಾ ಬರುತ್ತಾನೆಂದು ನನಗೆ ತೋರುತ್ತದೆ. ಸುಮ್ಮನಿದ್ದರೆ ಅವನು ಹೆಚ್ಚಿನವನಾಗಿ ಬಿಡುತ್ತಾನೆ. ಆದುದರಿಂದ ನಾವು ಅವನ ಮೇಲೆ ಯುದ್ಧವನ್ನು ಪ್ರಕಟಿಸಿ ಬಿಡಬೇಕೆಂದಿದ್ದೇನೆ. ನಿಮ್ಮ ಸಲಹೆ ಏನು ?" ಎಂದನು.

ಸುಕೀರ್ತಿ ಸ್ವಲ್ಪ ಹೊತ್ತು ಆಲೋಚನೆ ಮಾಡಿ, "ಮಹಾರಾಜಾ ! ದಯಮಾಡಿ ಈ ಪ್ರಯತ್ನವನ್ನು ಬಿಟ್ಟುಬಿಡಿರಿ. ಈಗ ಯುದ್ಧವು ಬೇಡ" ಎಂದನು.

ಸುಕೀರ್ತಿಯ ಮಾತು ಕೇಳಿ ಮಣಿದೀಪನು ಸ್ವಲ್ಪ ಆಶ್ಚರ್ಯಪಟ್ಟು, "ಏಕೆ ಹೀಗನ್ನುವಿರಿ ?" ಎಂದು ಕೇಳಿದನು.

"ನೀವು ಈಗ ಯುದ್ಧಕ್ಕೆ ಹೋಗುವುದು ರಾಜ್ಯ ಕಾಂಕ್ಷೆಯಿಂದ ತಾನೇ ? ನಿಮ್ಮ ಪ್ರಯತ್ನವು ಸಫಲವಾಗದೆ ಹೋದರೆ ನಮ್ಮ ಸೇನೆಗಳು ವಿಪರೀತ ನಷ್ಟಪಡುತ್ತವೆ, ಆಗ ಮತ್ತೊಬ್ಬ ಬಲಿಷ್ಠನಾದ ರಾಜ ನಮ್ಮ ಮೇಲೆ ದಂಡೆತ್ತಿ ಬಂದರೆ ರಾಜ್ಯಕ್ಕೆ ಅಪಾಯ" ಎಂದನು ಸುಕೀರ್ತಿ.

ವೃದ್ಧ ಮಂತ್ರಿ ಹೇಳಿದ ಮಾತು ಮಣಿದೀಪನಿಗೆ ರುಚಿಸಲಿಲ್ಲ. ಅದು ಆಗದ ಹೋಗದ ಸಲಹೆಯಂತೆ

ತೋರಿತು. ಆದರೂ ಅನುಭವಜ್ಞನೆಂತಲೂ, ಈತನ ಸಲಹೆಯನ್ನು ಮೀರಬಾರದೆಂದು ತಂದೆ ಒತ್ತಿ ಹೇಳಿದುದರಿಂದಲ್ಲೂ ಇಷ್ಟವಿಲ್ಲದೆಯೇ ಯುದ್ಧದ ಪ್ರಯತ್ನವನ್ನು ಬಿಟ್ಟು ಸುಮ್ಮನಾದನು.

ಅನಂತರ ಒಂದು ವಾರ ಕಳೆದ ಮೇಲೆ ಮಣಿ ದೀಪನು ಬೇಟೆಯಾಡಲು ಅರಣ್ಯಕ್ಕೆ ಹೋಗ ಬೇಕೆಂದು ಸಿದ್ಧನಾಗ ತೊಡಗಿದನು.

ಅದನ್ನು ತಿಳಿದು ಮಂತ್ರಿ ಸುಕೀರ್ತಿ ತಾನಾಗಿಯೇ ಅವನ ಬಳಿಗೆ ಬಂದು "ಮಹಾರಾಜಾ, ಇವತ್ತಿನ ದಿನ ಬೇಟೆಗೆ ಹೊರಡುವುದು ಒಳ್ಳೆಯದಲ್ಲ, ಎರಡು ದಿನ ತಾಳಿ ಆಮೇಲೆ ಹೋಗಬಹುದು" ಎಂದು ತಡೆ ಹೇಳಿದನು.



ಅದನ್ನು ಕೇಳಿ ಮಣಿದೀಪನ ಉತ್ಸಾಹವು ಇಳಿದು ಬೇಸರದಿಂದ, "ನೀವಾಗಿ ಬಂದು ಏಕೆ ಹೋಗ ಬಾರದೆಂದು ಹೇಳುವಿರಿ ? ಕಾರಣ ಹೇಳಿದರೆ ಒಳ್ಳೆಯದಿತ್ತು" ಎಂದನು.

"ಇನ್ನು ನಾಲ್ಕೈದು ಗಂಟೆಗಳೊಳಗೆ ದೊಡ್ಡ ಮಳೆಬರುವ ಸೂಚನೆಗಳು ಕಾಣುತ್ತಾ ಇವೆ. ಮಳೆ ಯಲ್ಲಿ ನೆನೆಯದಂತೆ ಇರಲಿಕ್ಕೆ ಅಡವಿಯಲ್ಲಿ ಜಾಗ ವಿರಲಾರದಷ್ಟೆ ? ಆದರೂ ಈ ವರ್ಷಾಕಾಲವು ಬೇಟೆಗೆ ಅನುಕೂಲವಾದುದಲ್ಲ. ಹೋಗಲೇ ಬೇಕೆಂದಾದರೆ ಎರಡು ದಿನ ತಾಳಿ ಹೋಗಬಹುದು. ಈಗ ಬರುವ ಮಳೆ ಬಂದು ಹೋಗಿಬಿಟ್ಟರೆ, ಮತ್ತೆ ಥಕ್ಕನೆ ಮಳೆ ಬಾರದು." ಎಂದನು ಸುಕೀರ್ತಿ.

ಮಣಿದೀಪನು ನಿರುತ್ಸಾಹದಿಂದ ಮಂತ್ರಿಯ ಸಲಹೆಯನ್ನು ಪಾಲಿಸಿ ಬೇಟೆಗೆ ಹೋಗುವು ದನ್ನು ಬಿಟ್ಟನು.

ನಾಲ್ಕೈದು ಗಂಟೆಗಳಲ್ಲಿಯೂ ಆ ಮೇಲೆಯೂ ಮಳೆ ಏನೂ ಬರಲಿಲ್ಲ, ಆಕಾಶದಲ್ಲಿ ಅಲ್ಲಲ್ಲಿ ಮೋಡಗಳ ತುಂಡುಗಳು ಹಾಗೆ ಹೀಗೆ ಚಲಿಸುತ್ತಿದ್ದುವು, ಅಷ್ಟೇ.

ಮಣಿದೀಪನು ಸುಕೀರ್ತಿಯನ್ನು ಬರಮಾಡಿಸಿ, "ನೋಡಿದಿರಾ, ಉತ್ಸಾಹದಲ್ಲಿದ್ದ ನನ್ನನ್ನು ಬೇಟೆಗೆ ಹೋಗುವುದು ಬೇಡವೆಂದು ತಡೆದಿರಿ. ಮಳೆ ಬರಲೇ ಇಲ್ಲ" ಎಂದನು.

ಸುಕೀರ್ತಿ ಮುಗುಳು ನಕ್ಕು, "ಮಹಾರಾಜಾ, ನಮ್ಮ ರಾಜಧಾನಿ ನಗರದಲ್ಲಿ ಮಳೆ ಬರಲಿಲ್ಲ ನಿಜವೇ. ಆದರೆ ನನ್ನ ಲೆಕ್ಕ ಪ್ರಕಾರ ಅರಣ್ಯದಲ್ಲಿ ಭಾರಿ ಮಳೆಯೇ ಬಂದಿರಬೇಕು. ಮೋಡ ಮತ್ತು ಗಾಳಿಗಳ ಲಕ್ಷಣ ನನಗೆ ಚೆನ್ನಾಗಿ ಗೊತ್ತಿದೆ" ಎಂದನು.

ಮಣಿದೀಪನು ಸಂಶಯ ನಿವಾರಣೆ ಮಾಡಿ ಕೊಳ್ಳಲಿಕ್ಕಾಗಿ ಅರಣ್ಯದ ಕಡೆಗೆ ಹೋಗಿ ನೋಡಿ ಬರಲು ಭಟರನ್ನು ಕಳುಹಿಸಿದನು. ಭಟರು ಹಿಂದಿರುಗಿ ಬಂದು, ಭಾರೀ ಮಳೆ ಅರಣ್ಯವನ್ನೆಲ್ಲಾ ಮುಳುಗಿ ಸಿರುವುದೆಂದೂ, ಕಾಡ ನೀರೋಳಿಗಳು ಇನ್ನೂ ಪ್ರವಹಿಸಿಕೊಂಡಿವೆಯೆಂದೂ, ಇನ್ನೂ ಮಳೆ ಬರುತ್ತಿದೆಯೆಂದೂ ಹೇಳಿದರು.



ಎರಡು ತಿಂಗಳು ಕಳೆದುವು, ಒಂದು ದಿನ ವೃದ್ಧ ಮಂತ್ರಿ ಸುಕೀರ್ತಿ ಮಣಿದೀಪನ ಬಳಿಗೆ ಬಂದು, "ಮಹಾರಾಜಾ, ನಮ್ಮ ನೆರೆಯ ರಾಜನಾದ ಜಯಪಾಲನು ತುಂಬ ಬಲಿಷ್ಠವಾಗಿ ನಮ್ಮ ಮೇಲೆ ಯುದ್ಧಕ್ಕೆ ಹೊರಡುವ ಸನ್ನಾಹದಲ್ಲಿರುವನೆಂದು ಗೊತ್ತಾಗಿದೆ. ನಾವು ಏನೋ ಒಂದು ನಿಶ್ಚಯಕ್ಕೆ ಬರಬೇಕು" ಎಂದನು.

ಆ ಮಾತು ಕೇಳಿದ ಕೂಡಲೇ ಮಣಿದೀಪನು ಕೋಪದಿಂದ, "ಹಾಗೇನು ? ಹಿಂದೊಮ್ಮೆ ನಾನೇ ಅವನ ಮೇಲೆ ದಂಡೆತ್ತಲು ಸಿದ್ಧನಾದಾಗ ಬೇಡ ವೆಂದು ಆಲೋಚನೆ ಹೇಳಿದಿರಿ. ಈಗ ಅವನೇ ನಮ್ಮ ಮೇಲೆ ಬರಲಿದ್ದಾನೆ ಅನ್ನುವಿರಿ, ಈಗ ಅವನನ್ನು ಇದಿರಿಸಿ ಯುದ್ಧ ಮಾಡಿದರೆ ಕೂಡಾ ಸೈನಿಕ ನಷ್ಟವು ತಪ್ಪುವುದಿಲ್ಲವಷ್ಟೆ ? " ಎಂದನು.

ಮಂತ್ರಿ ಸುಕೀರ್ತಿ ಶಾಂತತೆಯಿಂದ, "ನೀವು ಹೇಳುವ ಮಾತು ನಿಜವೇ. ನಾವು ದಾಳಿ ಮಾಡಿದರೂ, ಬರುವ ದಾಳಿಯನ್ನು ಇದಿರಿಸಿದರೂ ಆ ಬಗೆಯ ನಷ್ಟವು ತಪ್ಪುವಂತಿಲ್ಲ" ಎಂದು ಅಲ್ಲಿಗೆ ನಿಲ್ಲಿಸಿದನು.

ಮಣಿದೀಪನು ಆಶ್ಚರ್ಯದಿಂದ ಮಂತ್ರಿಯನ್ನು ನೋಡುತ್ತ, "ಹಾಗಾದರೆ ಯುದ್ಧ ಮಾಡದೆ ಶರಣಾಗ ಬೇಕೆನ್ನುವಿರಾ ? ಜಯಪಾಲನಿಗೆ ನಾವು ಸಾಮಂತರಾಗ ಬೇಕೆಂದು ನಿಮ್ಮ ಸಲಹೆಯೇ ? " ಎಂದನು.

"ಹಾಗೇನೂ ನನ್ನ ಅಭಿಪ್ರಾಯವಲ್ಲಪ್ಪಾ, ಜಯ ಪಾಲನು ಸೈನಿಕ ಬಲದಲ್ಲಿ ನಮಗೇನೂ ಕಡಮೆ ಯಾದವನಲ್ಲ. ಅಂಥವನೊಂದಿಗೆ ಯುದ್ಧ ಮಾಡು ವುದಕ್ಕಿಂತಲೂ ನೆಂಟಸ್ತಿಕೆ ಮಾಡಿಕೊಳ್ಳುವುದೇ ಒಳ್ಳೆಯದೆಂದು ಹೇಳಲಿಕ್ಕೆ ಬಂದೆನು. ಅವನಿಗೆ ಮದುವೆಯ ವಯಸ್ಸಿಗೆ ಬಂದ ಬುದ್ಧಿವಂತೆಯಾದ ಕುಮಾರಿಯೊಬ್ಬಳಿದ್ದಾಳೆ. ಅವಳು ನಿಮಗೆ ತಕ್ಕವ ಳೆಂದು ನನ್ನ ಅನಿಸಿಕೆ. ಅವಳನ್ನು ನೀವು ವಿವಾಹ ಮಾಡಿಕೊಂಡರೆ ನಮ್ಮದೇ ಮೇಲುಗೈಯಾಗುತ್ತದೆ. ಒಪ್ಪದಿದ್ದರೆ ಯುದ್ಧವಿದ್ದೇ ಇದೆ" ಎಂದನು ಮಂತ್ರಿ ಸುಕೀರ್ತಿ.

ಜಯಪಾಲನ ಕುಮಾರಿ ಕನಕಸುಂದರಿ ಅತ್ಯಂತ ಸುಂದರಿಯಾದವಳೆಂದು ಮಣಿದೀಪನೂ ಕೇಳಿದ್ದನು. ಸಾಧ್ಯವಾದರೆ ಅವಳನ್ನು ಮದುವೆಯಾಗಬೇಕೆಂದೂ ಅವನಿಗೆ ಅನಿಸಿತ್ತು.

ಆದುದರಿಂದ ಮಂತ್ರಿ ಸುಕೀರ್ತಿಯ ಈ ಬಗೆಯ ಆಲೋಚನೆ ಅವನಿಗೆ ಹಿಡಿಸಿತು. ಅವನ ಒಪ್ಪಿಗೆ ಯಿಂದ ಸುಕೀರ್ತಿ ಮಂತ್ರಿಯ ಮೂಲಕವಾಗಿಯೇ ಜಯಪಾಲನ ಬಳಿಗೆ ಮದುವೆಯ ರಾಯಭಾರವು ಹೋಯಿತು.

ಅದನ್ನು ಕೇಳಿ ಜಯಪಾಲನಿಗೆ ಬಹಳ ಸಂತೋಷ ವಾಯಿತು. ಅವನು ತನ್ನ ಮಗಳೊಂದಿಗೆ ಈ ಸಮಾಚಾರವನ್ನು ಹೇಳಿ, ಅವಳ ಇಷ್ಟವೇನೆಂದು ಕೇಳಿದನು.



ಕುಮಾರಿ ಕನಕಸುಂದರಿ ಒಂದೆರಡು ಕ್ಷಣ ಆಲೋಚನೆ ಮಾಡಿ, "ಅಪ್ಪಾ, ನೀವು ಜಸ್ವಂತ ರಾಜ್ಯದ ಮೇಲೆ ದಂಡಯಾತ್ರೆ ಮಾಡಲು ಸಿದ್ಧರಾಗಿದ್ದೀರಿ. ಹಾಗಿರುವಾಗ ಈ ಮದುವೆಯ ಪ್ರಸ್ತಾಪವೇಕೆ ? " ಎಂದು ಕೇಳಿದಳು.

"ಯುವಕನಾದ ಮಣಿದೀಪನು ಎಂದೋ ಒಂದು ದಿನ ನಮ್ಮ ಮೇಲೆ ಯುದ್ಧಕ್ಕೆ ಬರುತ್ತಾನೆಂದು ಅನುಮಾನಿಸಿಕೊಂಡೇ ಇದ್ದೆನು. ಆದಕ್ಕೇ ಅವನಿಗಿಂತ ಮೊದಲು ನಾನೇ ದಾಳಿ ತೆಗೆಯೋಣವೆಂದು ಮಾಡಿದೆನು. ಈಗ ಅವನು ನನ್ನ ಅಳಿಯನಾಗುವ ಹಾಗಿದ್ದರೆ ನಿನಗೆ ತಕ್ಕ ವರನೇ ಸಿಕ್ಕಿದ ಸಂತೋಷ ನನಗಾಗುತ್ತದೆ. ನಮ್ಮೊಳಗೆ ಪ್ರತ್ಯೇಕ ವೈರತ್ವಕ್ಕೆ ಕಾರಣವೇನಿಲ್ಲವಷ್ಟೆ ? " ಎಂದನು ಜಯಪಾಲ.

"ನೀವು ದಾಳಿ ಮಾಡಲಿದ್ದೀರೆಂದು ತಿಳಿದ ಮೇಲೆಯೇ ಜಸ್ವಂತ ರಾಜ್ಯದಿಂದ ನೆಂಟಸ್ತಿಕೆಯ ರಾಯಭಾರ ಬಂದಿದೆ. ಆಲೋಚಿಸಿ ನೋಡಿರಿ ಅಪ್ಪಾ, ಇದರಲ್ಲಿ ಏನೋ ತಂತ್ರವಿರಲೂ ಬಹುದು!" ಎಂದಳು ಕನಕಸುಂದರಿ.

ಜಯಪಾಲನು ಸ್ವಲ್ಪಹೊತ್ತು ಆಲೋಚಿಸುತ್ತ ಸುಮ್ಮನಿದ್ದು, ಆಮೇಲೆ, "ಆ ರಾಜ್ಯದ ವೃದ್ಧ ಮಂತ್ರಿಯಾದ ಸುಕೀರ್ತಿ ಬಹಳ ಬುದ್ಧಿಶಾಲಿ. ರಾಜತಂತ್ರದಲ್ಲಿ ಅವನನ್ನು ಮೀರಿಸುವವರಿಲ್ಲ. ಇದರಲ್ಲಿ ಆತನ ಆಲೋಚನೆಯೇ ಮುಖ್ಯವಾಗಿದೆಯೆಂಬುದರಲ್ಲಿ ಸಂದೇಹವಿಲ್ಲ" ಎಂದನು.

ಕನಕಸುಂದರಿ ಅದು ನಿಜವೆಂದು ತಲೆಯಾಡಿಸಿ "ಮಂತ್ರಿ ಸುಕೀರ್ತಿಯ ಅನುಮತಿಯೋ ಸಲಹೆಯೋ ಏನಿಲ್ಲದೆ ಆ ರಾಜನು ಬೇಟೆಗೆ ಕೂಡಾ ಹೋಗುವುದಿಲ್ಲವಂತೆ. ನಾಳೆ ಅವನ ಸಲಹೆಯ ಹಾಗೆ ನನ್ನನ್ನು ಬಿಟ್ಟುಬಿಡಲಾರನೆಂದು ಹೇಗೆ ನಂಬುವುದು ? ಆ ಮಂತ್ರಿಗೆ ದೇಶ ಬಹಿಷ್ಕರಣ ಶಿಕ್ಷೆ ವಿಧಿಸಿದರೇನೇ ನಾನು ಜಸ್ವಂತ ರಾಜನನ್ನು ಮದುವೆಯಾಗುತ್ತೇನೆ. ಹೀಗೆ ಹೇಳಿ ಆ ರಾಯಭಾರಿಯನ್ನು ಕಳುಹಿಸಿಬಿಡಿರಿ" ಎಂದಳು.

ಜಯಪಾಲನು ಹಾಗೆಯೇ ಹೇಳಿ ಕಳುಹಿಸಿದನು. ಆ ಸಮಾಚಾರ ಕೇಳಿದ ಕೂಡಲೇ ಮಣಿದೀಪನು ಹಿಡಿಸಲಾಗದಷ್ಟು ಕೋಪದಿಂದ, "ಆ ಜಯಪಾಲನಿಗೆ ಇಷ್ಟು ಪೊಗರೆ !" ಎಂದು ಹಲ್ಲು ಕಡಿದನು.

ಮಂತ್ರಿ ಸುಕೀರ್ತಿ ಶಾಂತನಾಗಿ, "ಮಹಾರಾಜಾ, ಶಾಂತರಾಗಿರಿ. ನಾನು ತಮ್ಮ ಪೂರ್ವಿಕರು ವಾಸವಾಗಿರುವ ಪ್ರಸೇನ ರಾಜ್ಯಕ್ಕೆ ಹೋಗಿ ನನ್ನ ಶೇಷ ಜೀವಿತವನ್ನು ಕಳೆಯುತ್ತೇನೆ. ಬೇಡವೆನ್ನದೆ ಅಪ್ಪಣೆ ಕೊಡಿರಿ" ಎಂದನು.

"ಇಲ್ಲ, ಕೂಡದು. ನಿಮ್ಮನ್ನು ಬಿಡಲಾರೆ ನೀವು ಮಂತ್ರಿಯಾಗಿ ಇಲ್ಲೇ ಇರಬೇಕು. ಈ ವಿಷಯದಲ್ಲಿ ನಾನು ನಿಮ್ಮ ಸಲಹೆಯನ್ನು ಮೀರುತ್ತೇನೆ" ಎಂದನು ಮಣಿದೀಪ.

ಆಮೇಲೆ ಐದಾರು ದಿನಗಳಲ್ಲಿ ಮಣಿದೀಪನು ಜಯಪಾಲನ ರಾಜ್ಯದ ಮೇಲೆ ದಾಳಿ ಮಾಡಿದನು. ಆದರೆ ಜಯಪಾಲನು ದೊಡ್ಡ ಯುದ್ಧವನ್ನೇನೂ ಮಾಡದೆ ಅವನೊಂದಿಗೆ ರಾಜಿಯ ಪತಾಕೆ ಎತ್ತಿ, ತನ್ನ ಮಗಳು ಕನಕಸುಂದರಿಯನ್ನು ಅವನಿಗೆ ಕೊಟ್ಟು ವಿವಾಹ ಮಾಡಿದನು.

ಬೇತಾಳವು ಹೀಗೆ ಕಥೆಯನ್ನು ಮುಗಿಸಿ, "ರಾಜಾ, ಇದರಲ್ಲಿ ಕನಕಸುಂದರಿಯ ಪ್ರವರ್ತನೆ ತುಂಬಾ ತಪ್ಪಾದುದಲ್ಲವೆ? ಅವಳು ಹೇಳಿದ್ದೇನು? ಕಡೆಗೆ ಮಾಡಿದ್ದೇನು? ಮಂತ್ರಿ ಸುಕೀರ್ತಿಗೆ ದೇಶ ಬಹಿಷ್ಕರಣ ಶಿಕ್ಷೆ ವಿಧಿಸಿದ ಹೊರತು ಮಣಿದೀಪನನ್ನು ಮದುವೆಯಾಗಲಾರೆನೆಂದವಳು, ರಾಜಿಯ ಪದ್ಧತಿಯಲ್ಲಿ ವಿವಾಹಕ್ಕೆ ಒಪ್ಪಿದಳೇಕೆ? ತಾನು ಕಷ್ಟಗಳಿಗೆ ಬೀಳುತ್ತೇನೆಂಬ ಕಾರಣದ ಹೊರತು ಬೇರೇನಿದೆ? ಇದಕ್ಕೆ ಸರಿಯಾದ ಸಮಾಧಾನ ತಿಳಿದೂ ಹೇಳದಿದ್ದ ಪಕ್ಷದಲ್ಲಿ ನಿನ್ನ ತಲೆಯೊಡೆದು ಹೋಳಾಗುತ್ತದೆ" ಎಂದು ಸುಮ್ಮನಾಯಿತು.

ತ್ರಿವಿಕ್ರಮನು ಕೂಡಲೇ ಉತ್ತರ ಕೊಟ್ಟನು, "ಕನಕಸುಂದರಿಯ ಪ್ರವರ್ತನೆಯಲ್ಲಿ ಯಾವ ಅನುಚಿತವೂ ಇಲ್ಲ. ಮಣಿದೀಪನು ತನ್ನ ತಂದೆಯ ಆದೇಶದಂತೆ ಪ್ರತಿಯೊಂದಕ್ಕೂ ಮಂತ್ರಿ ಸುಕೀರ್ತಿಯ ಸಲಹೆ ಇಲ್ಲದೆ ಯಾವ ಕೆಲಸವನ್ನೂ ಮಾಡಲಾರನೆಂದು ಅವಳಿಗೆ ಗೊತ್ತಿತ್ತು. ಯಾವಾಗಲೂ ಮಂತ್ರಿಗಳ ಸಲಹೆಯನ್ನೇ ಅಕ್ಷರಶಃ ಪಾಲಿಸಿಕೊಂಡಿರುವ ರಾಜನು, ಕಾರಣ ಯಾವುದೇ ಇರಲಿ, ಒಂದು ರೀತಿಯಲ್ಲಿ ಅಸ್ವತಂತ್ರನೇದೇ ಆಯಿತು. ಅಂತಹವನಿಗೆ ಕ್ರಮೇಣ ಸ್ವಂತವಾಗಿ ಆಲೋಚಿಸುವ ಶಕ್ತಿ ಕುಂಠಿಸುತ್ತದೆ. ಯಾರೋ ಒಬ್ಬರ ಕೈಯೊಳಗಿನ ಕೀಲುಗೊಂಬೆಯಾಗುತ್ತಾನೆ. ಮಣಿದೀಪನಲ್ಲಿ ಸ್ವತಂತ್ರವಾಗಿ ಆಲೋಚಿಸುವ ಶಕ್ತಿ ಇದೆಯೋ ಇಲ್ಲವೋ ಎಂದು ಪರೀಕ್ಷಿಸಲಿಕ್ಕಾಗಿಯೇ ಕನಕಸುಂದರಿ ಮಂತ್ರಿ ಸುಕೀರ್ತಿಗೆ ದೇಶ ಬಹಿಷ್ಕರಣ ಶಿಕ್ಷೆ ಕೊಡಬೇಕೆಂದಳು. ಈ ವಿಷಯದಲ್ಲಿ ಮಣಿದೀಪನು ತನ್ನ ನಿರ್ಧಾರದಿಂದ ಮಂತ್ರಿಯನ್ನು ಇರಿಸಿಕೊಂಡನು, ಜಯಪಾಲನ ಮೇಲೆ ಯುದ್ಧಕ್ಕೂ ಹೊರಟನು. ಇದರಿಂದ ಅವನಲ್ಲಿ ತನಗೆ ಹಿಡಿಸದ ಸಲಹೆಗಳನ್ನು ಮೀರುವ ಶಕ್ತಿಯೂ, ಸ್ವತಂತ್ರವಾಗಿ ಆಲೋಚಿಸುವ ಮಿದುಳೂ ಇದೆಯೆಂಬುದು ಗೊತ್ತಾಯಿತು. ಇದಕ್ಕೆಲ್ಲಾ ಕನಕಸುಂದರಿಯ ನಿರ್ಭಯತೆಯೇ ಕಾರಣ. ಅವಳ ಪರೀಕ್ಷೆಯಲ್ಲಿ ಮಣಿದೀಪನು ಗೆದ್ದುದರಿಂದ ರಾಜೀ ಮಾಡಿಸಿ ಅವನನ್ನು ಮದುವೆಯಾದಳು."

ಹೀಗೆ ರಾಜನಿಗೆ ಮೌನಭಂಗವಾದ ಕೂಡಲೇ ಬೇತಾಳವು ಶವದೊಂದಿಗೆ ಮಾಯವಾಗಿ ಹೋಗಿ ಮರದ ಕೊಂಬೆಯಲ್ಲಿ ನೇತಾಡತೊಡಗಿತು.





# ಪಂದ್ಯ

ಅದೊಂದು ಊರಿನಲ್ಲಿ ವೀರಭದ್ರನೆಂಬ ಗೃಹಸ್ಥನಿಗೆ ಯಾವಾಗಲೂ ತನ್ನ ಹೆಂಡತಿಯೊಂದಿಗೆ ಒಂದು ವಿಷಯದಲ್ಲಿ ಪಂದ್ಯ ಬೀಳುತ್ತಿತ್ತು. ಒಂದು ದಿನ ಅವನು ಹೊರಗೆ ಹೊರಡುತ್ತ ಅಡಿಗೇ ಮನೆಯಲ್ಲಿದ್ದ ಹೆಂಡತಿಯನ್ನು ಕರೆದು, "ನೋಡು, ಈಸಾರಿ ನಾನು ಎಷ್ಟು ರಾತ್ರಿಯಾದರೂ ಬೆಳಗಾಗುವುದರೊಳಗೆ ಬಂದು ಸೇರಿಬಿಡುತ್ತೇನೆ" ಎಂದನು.

ಈ ಮಾತು ಅವಳಿಗೇನೂ ಹೊಸತಲ್ಲ. ಕತ್ತಲೆ ಎಂದರೆ ತನ್ನ ಗಂಡನು ಹೆದರುತ್ತಾನೆಂದು ಅವಳಿಗೆ ಗೊತ್ತಿತ್ತು. "ಸುಮ್ಮನೆ ಹಾಗೇಕೆ ಹೇಳ್ತೀರಿ? ರಾತ್ರಿಯಲ್ಲಿ ನೀವು ಬರವವರಲ್ಲ ಅಂತ ನನಗೆ ಗೊತ್ತಿಲ್ಲವೆ?" ಎಂದಳು.

"ನೀನೊಬ್ಬಳು! ನನ್ನ ವಿಷಯ ಪೂರಾ ಗೊತ್ತಿದ್ದವಳ ಹಾಗೆ! ನಾನು ಏನು ಹೇಳಿದರೂ ಅಲ್ಲವೆನ್ನಲಿಕ್ಕೆ ಚೆನ್ನಾಗಿ ಕಲಿತಿದ್ದೀ. ನಾನು ಬೆಳಗಾಗುವುದರೊಳಗೆ ಮನೆಗೆ ಬಂದು ಸೇರದಿದ್ದರೆ, ನೋಡು!" ಎಂದನು ವೀರಭದ್ರ.

"ಬಂದಾಗ ನೋಡಿಕೊಳ್ಳುತ್ತೇನೆ. ನಿಮ್ಮ ಹಟವೂ ಪಂದ್ಯವೂ ಕೇಳಲಿಕ್ಕೆ ಚೆನ್ನಾಗಿದೆ!" ಎಂದು ಹೆಂಡತಿ ಮುಗುಳು ನಗುತ್ತ ಒಳಕ್ಕೆ ಹೋದಳು. ಹೀಗೆ ಆ ಗಂಡ ಹೆಂಡಿರೊಳಗೆ ಅನೇಕಸಾರಿ ವಾದವಿವಾದ ನಡೆದಿತ್ತು. ಯಾವಾಗಲೂ ಹೆಂಡತಿಯ ಮಾತೇ ನಿಜವಾಗುತ್ತಿತ್ತು. ವೀರಭದ್ರನಿಗೆ ಆಕ್ರೋಶ ಏಳುತ್ತಿತ್ತು. ಏನಾದರೂ ಸರಿ. ಈ ಸಾರಿ ಅಂದು ಕೊಂಡ ಪ್ರಕಾರ ಹಿಂದಿರುಗಿ ಬರಲೇ ಬೇಕೆಂದು ಕೊಂಡು ಹೊರಡುವಾಗಲೇ ವೀರಭದ್ರನು ನಿಶ್ಚಯಿಸಿಕೊಂಡನು.

ಆದರೆ ಅವನು ತನ್ನ ಊರಿನ ಮೇರೆಯನ್ನು ದಾಟಿ ಸ್ವಲ್ಪದೂರ ಹೋಗುವಷ್ಟರಲ್ಲಿ, ನೆರೆಯ ಊರಿನಿಂದ ಬರುವ ಒಬ್ಬನನ್ನು ನೋಡಿದನು. ಸಮೀಪ ಬಂದ ಕೂಡಲೇ ಅವನನ್ನು ನಿಲ್ಲಿಸಿ. "ಜಗನ್ನಾಥನಲ್ಲವೆ? ನನಗಾಗಿಯೇ ಬರುತ್ತಿರುವ ಹಾಗಿದೆ?" ಎಂದು ಕೇಳಿದನು.

"ಹೌದಯ್ಯಾ, ಹೌದು. ಸಣ್ಣೋಪಾಧ್ಯರು ಅಗತ್ಯ ಕೆಲಸ ಮೈ ಮೇಲೆ ಬಂದುದರಿಂದ ಅವಸರವಾಗಿ ರಾಜಧಾನಿಗೆ ಹೋದರು. ನೀವು ಹದಿನೈದು ದಿನ ತಾಳಿ ಬಂದರೆ ಸಾಕಂತೆ. ಇದನ್ನು ಹೇಳಲಿಕ್ಕೇ ನನ್ನನ್ನು ಕಳುಹಿಸಿದ್ದಾರೆ." ಎಂದನು ಜಗನ್ನಾಥ.

"ವಸುಂಧರ"

“ಹಾಗೇನು ? ಸರಿಸರಿ” ಎಂದು ವೀರಭದ್ರನು ತನ್ನ ಮಿತ್ರನಾದ ಗೋವಿಂದನ ಮನೆಗೆ ಹೋಗಿ, ನಡೆದ ಸಂಗತಿಯನ್ನು ಹೇಳಿದನು.

“ಹಾಗಾದರೆ ಈ ದಿನ ನಮ್ಮ ಕೆಲಸ ಆಗುವುದಿಲ್ಲವೆಂದಾಯಿತು. ಸರಿ, ಇನ್ನೊಮ್ಮೆ ಹೋಗೋಣ. ನೀನು ಮನೆಗೆ ಹೋಗಿಬಿಡು” ಎಂದನು ಗೋವಿಂದ.

“ಅದಾಗದು ಗೋವಿಂದಾ. ಇವತ್ತು ನಾನು ರಹಸ್ಯವಾಗಿ ನಿನ್ನ ಮನೆಯಲ್ಲೇ ಇದ್ದು, ನಾಳೆ ಬೆಳಂಜಾವದ ಹೊತ್ತಿಗೆ ಹೊರಟು ಹೋಗಿ ಬಿಡುತ್ತೇನೆ. ಈ ಒಂದು ಸಾರಿಯಾದರೂ ನನ್ನ ಹೆಂಡತಿಯೊಂದಿಗೆ ಕಟ್ಟಿದ ಪಂದ್ಯದಲ್ಲಿ ಗೆದ್ದು ತೀರಬೇಕಾಗಿದೆ !” ಎಂದನು ವೀರಭದ್ರ.

ಗೋವಿಂದನು ನಗುತ್ತ ಅದಕ್ಕೆ ಒಪ್ಪಿದನು. ಆ ದಿನವಿಡೀ ವೀರಭದ್ರನು ಆ ಮನೆಯಲ್ಲೇ ಕಳೆದನು. ಆ ದಿನ ಗೋವಿಂದನು ಹೆಂಡತಿಯನ್ನು ಅವಳ ತೌರಿಗೆ ಕಳುಹಿಸಿದ್ದುದರಿಂದ, ಮನೆ ತುಂಬ ಈ ಮಿತ್ರರದೇ ದರಬಾರಾಯಿತು, ಪಿಡಿಯಾಟದ ಹುಚ್ಚಿನ ಗೋವಿಂದನು ರಾತ್ರಿಯಲ್ಲಿ ತನ್ನಿಬ್ಬರು ಮಿತ್ರರನ್ನು ಕರೆಯಿಸಿದನು. ನಾಲ್ವರೂ ಕೂಡಿ ಹೊತ್ತು ಹೋಗುವುದು ತಿಳಿಯದಂತೆ ಮಧ್ಯ ರಾತ್ರಿ ಮೀರುವವರೆಗೂ ಪಿಡಿಯಾಟವಾಡಿದರು. ಆಮೇಲೆ ಎಲ್ಲರಿಗೂ ಗಾಢ ನಿದ್ರೆ ಆವರಿಸಿತು, ಮತ್ತೆ ಅವರಿಗೆ ಎಚ್ಚರವಾದಾಗ ಮಧ್ಯಾಹ್ನದ ಬಿಸಿಲು ! ಗೋವಿಂದನು ವೀರಭದ್ರನನ್ನು ಪರಿತಾಪದಿಂದ ನೋಡುತ್ತ, “ಒಟ್ಟಿನ ಮೇಲೆ ನಿನ್ನ ಹೆಂಡತಿಯ ಮಾತೇ ಗೆಲ್ಲುವ ಹಾಗಿದೆ. ನೀನು ಮಧ್ಯಾಹ್ನದ ಹೊತ್ತಿಗೆ ಮನೆಗೆ ಹೋಗುತ್ತೀ” ಎಂದನು.

ವೀರಭದ್ರನಿಗೆ ಕೆಟ್ಟ ಆಕ್ರೋಶವೆದ್ದಿತು. “ಊಹುಂ, ಕತ್ತಲೆಯಾದ ಮೇಲೆಯೇ ಮನೆಗೆ ಹೋಗುತ್ತೇನೆ” ಎಂದನು ಹಲ್ಲು ಕಚ್ಚಿ.

ಹಾಗೆಯೇ ಅವನು ರಾತ್ರಿಯ ಹೊತ್ತಿನಲ್ಲಿ ಮನೆಗೆ ಬಂದು ಮುಟ್ಟಿದನು. ಅವನನ್ನು ನೋಡಿ ಹೆಂಡತಿ, “ಕಡೆಗೆ ನಾನು ಹೇಳಿದ ಹಾಗೇ ಆಯಿತು!” ಎಂದಳು.

“ನೀನು ಹೇಳಿದ ಹಾಗೆ ಎಲ್ಲಿ ಆಯಿತು ? ನಾನು ಹಗಲಲ್ಲಿ ಬರಲಿಲ್ಲ. ರಾತ್ರಿಯಲ್ಲಿ ಬಂದಿದ್ದೇನೆ. ನೀನು ಹೇಳಿದ ಹಾಗೆ ನನಗೆ ಬರಲಿಕ್ಕೆ ಆಗದ ಮೇಲೆ, ನೀನು ಹೇಳಿದ ಪ್ರಕಾರವೇ ಏಕೆ ಬರಬೇಕು ? ಅದಕ್ಕೇ ರಾತ್ರಿಯಲ್ಲೇ ಬಂದಿದ್ದೇನೆ. ಪಂದ್ಯದಲ್ಲಿ ನಾನೇ ಗೆದ್ದವನು !” ಎಂದನು.

“ಅದಕ್ಕಾಗಿ ನಾನು ನಗಬೇಕೋ ಅಳಬೇಕೋ ನೀವೇ ಹೇಳಿಬಿಡಿರಿ” ಎಂದಳು ಹೆಂಡತಿ. “ಸೋತೆನು ಅನ್ನು, ಸಾಕು” ಎಂದ ವೀರಭದ್ರ ನಗುತ್ತ. “ನಿಮಗೆ ಸಂತೋಷವಾಗುವಂತೆ ಸೋಲುವುದು ನನಗೂ ಸಂತೋಷವೇ” ಎಂದು ನಕ್ಕಳು ಹೆಂಡತಿ.





# ತಿಳುವಳಿಕೆ ಎಂದರೇನು?

ಹಿಂದೆ ಚಿತ್ರಾವರದ ಗ್ರಾಮಾಧಿಕಾರಿಯಾಗಿದ್ದ ಒಬ್ಬ ದೊಡ್ಡ ಮನುಷ್ಯನಿಗೆ ಒಂದು ವಿನೋದ ಬುದ್ಧಿ ಇದ್ದಿತು. ಆಗಾಗ ಚಿಕ್ಕ ಚಿಕ್ಕ ಪರೀಕ್ಷೆಗಳನ್ನಿಟ್ಟು ಗೆದ್ದವರಿಗೆ ಬಹುಮಾನ ಕೊಡುವುದು ಅವನಿಗೊಂದು ವಿನೋದ.

ಒಮ್ಮೆ ತನ್ನ ಗ್ರಾಮದಲ್ಲಿ ಎಲ್ಲರಿಗಿಂತ ಹೆಚ್ಚು ತಿಳುವಳಿಕೆಯುಳ್ಳವನು ಯಾರೆಂದು ನೋಡ ಬೇಕೆನಿಸಿತು ಅವನಿಗೆ.

ಆದರೆ ಆ ಗ್ರಾಮದಲ್ಲಿ ಯಾರನ್ನು ಕೇಳಿದರೂ, “ಈ ಸಣ್ಣ ಸಂಗತಿಯೇ ನಿಮಗೆ ತಿಳಿಯದೆ ? ನಮ್ಮೂರವರೇ ಆದ ರಾಮಪ್ಪ, ಭೀಮಪ್ಪ, ಸೋಮಪ್ಪರಿಗಿಂತ ಹೆಚ್ಚು ತಿಳುವಳಿಕೆಯವರು ಬೇರೆ ಯಾರಿದ್ದಾರೆ ? ” ಎನ್ನುತ್ತಿದ್ದರು.

ಇದರಿಂದ ಗ್ರಾಮಾಧಿಕಾರಿಗೆ ಕೆಲಸ ಸುಲಭ ವಾಯಿತು.

ಒಂದು ದಿನ ಆ ಗ್ರಾಮಾಧಿಕಾರಿ ಆ ಮೂವರನ್ನೂ ತನ್ನ ಬಳಿಗೆ ಕರೆಯಿಸಿ, “ಈ ಊರಿನಲ್ಲಿ ನೀವು ಮೂವರೂ ಬಹಳ ತಿಳಿವಳಿಕೆಯುಳ್ಳವರೆಂದು ಎಲ್ಲರೂ ಹೇಳುತ್ತಾರೆ, ಆದರ ನಿಜ ಗೊತ್ತಾಗಬೇಕು. ಅದಕ್ಕಾಗಿ ನಿಮಗೆ ಒಂದು ಸಣ್ಣ ಪರೀಕ್ಷೆ ಇಡುತ್ತೇನೆ, ಒಪ್ಪಿಕೊಳ್ಳುವಿರಾ ? ” ಎಂದು ಕೇಳಿದನು.

ಗ್ರಾಮಾಧಿಕಾರಿ ಹೇಳಿದುದನ್ನು ಕೇಳಿ ಮೂವ ರಿಗೂ ಬಹಳ ಆಶ್ಚರ್ಯವಾಯಿತು. ಇವರಿಗೆ ತಮ್ಮ ಬುದ್ಧಿವಂತಿಕೆಯನ್ನು ಪರೀಕ್ಷೆ ಮಾಡಬೇಕೆಂದು ಏಕೆ ತೋರಬೇಕು ? ಅದನ್ನು ತಿಳಿಯದೆ ಒಮ್ಮೆಲೇ ಒಪ್ಪಿಬಿಡುವುದು ಒಳ್ಳೆಯದಲ್ಲವೆಂದು ಮೂವರಿಗೂ ತೋರಿತು.

“ಮೊದಲು ನೀವು ಇಡುವ ಪರೀಕ್ಷೆ ಎಂತಹು ದೆಂದು ಹೇಳಿರಿ. ಆಮೇಲೆ ತಿಳಿಸುತ್ತೇವೆ ” ಎಂದರು ಮೂವರೂ.

“ಅದೇನೆಂದರೆ, ತಿಳುವಳಿಕೆಯುಳ್ಳವರು ಎಂತಹ ಕಷ್ಟವನ್ನಾದರೂ ತಡೆದುಕೊಂಡು ಗೆದ್ದೇ ಗೆಲ್ಲುವರು. ನಿಮ್ಮನ್ನು ಮರಳುಗಾಡಿನ ಮಧ್ಯದಲ್ಲಿ ಬೇರೆ ಬೇರೆ ಮೂರು ಪ್ರಾಂತಗಳಲ್ಲಿ ಆಹಾರ ಪದಾರ್ಥವೇನೂ ಕೊಡದೆ ಬಿಟ್ಟುಬಿಡುತ್ತೇನೆ. ಯಾರು ಮೊದಲು ಹಿಂದಿರುಗಿ ಬರುವರೋ ಅವರಿಗೆ ಹತ್ತು ವರಹ ಬಹುಮಾನ ಕೊಡುತ್ತೇನೆ. ಇಷ್ಟೇ ಪರೀಕ್ಷೆ ” ಎಂದನು ಗ್ರಾಮಾಧಿಕಾರಿ.

“ ವಸುಂಧರ ”

ಅದಕ್ಕೆ ರಾಮನು, "ಹೊಗೆ ಬಿಸಿಯಾದರೆ ನಡೆಯುವುದು ಕಷ್ಟ. ಪಾದಕ್ಕೆ ಬಿಸಿ ತಾಗದಂತೆ, ಬೆರಳುಗಳೆಡೆಗೆ ಮರುಳು ಸಿಕ್ಕದಂತೆ ನನಗೆ ಪ್ರತ್ಯೇಕ ರೀತಿಯ ಪಾದರಕ್ಷೆಗಳನ್ನು ಕೊಡಿಸಿರಿ. ನಿಮ್ಮ ಪರೀಕ್ಷೆಗೆ ಸಿದ್ಧನಾಗುತ್ತೇನೆ" ಎಂದನು.

ಆಮೇಲೆ ಭೀಮನು ಗ್ರಾಮಾಧಿಕಾರಿಯೊಂದಿಗೆ. "ನಾನು ಹೇಗೆ ಈ ಕಷ್ಟದಿಂದ ಗೆದ್ದುಬರುವೆನೆಂಬುದನ್ನು ಯಾರಿಗೂ ಹೇಳಲಾರೆ. ಯಾವುದಕ್ಕೂ ನೀವು ನನ್ನೊಂದಿಗೆ ನಂಬುಗಸ್ತನಾದ ಇನ್ನೊಬ್ಬನನ್ನು ಕೂಡಾ ಕಳಿಸಿದರೆ ಒಳ್ಳೇದು" ಎಂದನು.

ಅವನ ಮಾತಿಗೆ ಗ್ರಾಮಾಧಿಕಾರಿ ಆಶ್ಚರ್ಯಪಡುತ್ತ "ಇದರಲ್ಲೇನೋ ವಕ್ರತೆ ಇರುವ ಹಾಗಿದೆ. ಜತೆಗಾರನು ಏಕೆಂದು ಸ್ವಲ್ಪ ವಿವರಿಸಿ ಹೇಳಿಬಿಡು" ಎಂದನು.

"ನೀವು ಹೇಳಿದಂತೆ ತಿಳುವಳಿಕೆಯುಳ್ಳವನು ಕಷ್ಟಗಳನ್ನು ಧೈರ್ಯದಿಂದಲೂ, ಜಾಣತನದಿಂದಲೂ ಇದಿರಿಸಿ ಪಾರಾಗುವನೆಂಬುದು ನಿಜವೇ. ಕಷ್ಟದ ಸಮಯದಲ್ಲಿ ಇಬ್ಬರಿದ್ದರೆ ಪರಿಷ್ಕಾರ ಮಾರ್ಗವು ಇನ್ನಿಷ್ಟು ಸುಲಭವಾಗುತ್ತದೆ. ಅಲ್ಲದೆ ನಿಮಗೆ ನಂಬುಗಸ್ಥನಾದವನನ್ನು ಪ್ರಾಣ ಹೋಗುವ ಕೆಲಸಕ್ಕೆ ಕಳುಹಿಸಲಾರಿರಿ. ಮರುಭೂಮಿಯ ಮಧ್ಯದಿಂದ ಹೊರಬೀಳಲು ಅವನಿಗೆ ಏನೋ ಸುಲಭವಾದ ದಾರಿ ನೀವು ಸೂಚಿಸಿರಲೂ ಸಾಕು. ಅದು ನನಗೂ ಉಪಯೋಗವಾದೀತು. ಇಂತಹ ಪರೀಕ್ಷೆಯಲ್ಲಿ ಈ ಬಗೆಯ ಷರತ್ತು ಕೂಡಾ ಬಹು ಮುಖ್ಯ!" ಎಂದು ಹೇಳಿದನು.

"ನೀನೇನು ಹೇಳುವೆ?" ಎಂದು ಗ್ರಾಮಾಧಿಕಾರಿ ಸೋಮಪ್ಪನನ್ನು ಕೇಳಿದನು.

"ತಿಳುವಳಿಕೆ ಚೆನ್ನಾಗಿದ್ದವನು ಧೈರ್ಯದಿಂದ ಉಪಾಯವಾಗಿ ಬಂದ ಕಷ್ಟಗಳನ್ನು ತೊಲಗಿಸಿಕೊಳ್ಳುತ್ತಾನೆಂಬುದು ನಿಜವೇ. ಆದರೂ ಬೇಕಂತಲೇ ಕಷ್ಟಗಳನ್ನು ಬೆಲೆ ಕೊಟ್ಟು ತಂದುಕೊಳ್ಳಲಾರನು. ನೀವು ನನ್ನನ್ನು ತಿಳುವಳಿಕೆಯುಳ್ಳವನಲ್ಲವೆಂದುಕೊಂಡರೂ ನನಗೇನೂ ನಷ್ಟವಾಗದು. ಒಂದು ಹತ್ತು ವರಹಗಳಿಗಾಗಿ ಇಂತಹ ಅಪಾಯಕರವಾದ ಪರೀಕ್ಷೆಗೆ ನಾನು ಒಪ್ಪಿಕೊಳ್ಳುವುದಿಲ್ಲ. ಕ್ಷಮಿಸಿರಿ" ಎಂದನು ಸೋಮಪ್ಪ.

ಅವನು ಹೇಳಿದ ಉತ್ತರವನ್ನು ಕೇಳಿದ ಕೂಡಲೇ ತಿಳುವಳಿಕೆ ಅಂದರೆ ಏನೆಂಬುದು ಗ್ರಾಮಾಧಿಕಾರಿಗೆ ಅರ್ಥವಾಯಿತು, ಅದರಿಂದ ಅವನು ಈ ಪರೀಕ್ಷೆಯ ಸಂಗತಿಯನ್ನು ಬಿಟ್ಟುಕೊಟ್ಟು ಅವರನ್ನು ಕಳುಹಿಸಿದನು. ಹೀಗೆ ಹತ್ತು ವರಹಗಳನ್ನು ಉಳಿಸಿಕೊಂಡು ತಾನೂ ತಿಳುವಳಿಕೆಯುಳ್ಳವನಾದೆನೆಂದು ತನ್ನೊಳಗೇ ತೃಪ್ತಿಪಟ್ಟನು.



# ಒಂದೇ ಒಂದು ದುರಭ್ಯಾಸ

**ಒಂ**ದು ಅಗ್ರಹಾರದಲ್ಲಿ ಆನಂದನೆಂಬ ಒಬ್ಬ ದೊಡ್ಡ ಪಂಡಿತನಿದ್ದನು. ಅವನಿಗೆ ಸುಧಾಮನೆಂಬವನು ಒಬ್ಬನೇ ಮಗ. ಅವನಿಗೆ ಮದುವೆಯ ವಯಸ್ಸು ಬಂದಿತ್ತು. ಆದರೆ ತಿಳಿದವರಾರೂ ಅವನಿಗೆ ಹುಡುಗಿಯನ್ನು ಕೊಡುವೆವೆಂದು ಮುಂದೆಬರಲಿಲ್ಲ.

ಹೀಗಿರುವಾಗ ಹಿಂದೆ ಆನಂದನೊಂದಿಗೆ ಗುರುಕುಲದಲ್ಲಿ ಸಹಾಧ್ಯಾಯಿಯಾಗಿದ್ದ ಗೋವಿಂದನೆಂಬವನು ತನ್ನ ಮಗಳಿಗೆ ಮದುವೆಯ ಸಂಬಂಧ ಹುಡುಕುತ್ತ ಆನಂದನಿರುವ ಅಗ್ರಹಾರಕ್ಕೆ ಬಂದನು.

ಬಹಳ ಕಾಲದ ಮೇಲೆ ಸಂಧಿಸಿದ ಮಿತ್ರರಿಬ್ಬರೂ ಒಬ್ಬರನ್ನೊಬ್ಬರು ನೋಡಿ ಬಹು ಸಂತೋಷಗೊಂಡು ಚಿಕ್ಕಂದಿನ ಸಂಗತಿಗಳನ್ನು ಕುರಿತು ಅದೂ ಇದೂ ನೆನೆಸಿಕೊಂಡು ಮಾತಾಡತೊಡಗಿದರು.

ಆಗ ಗೋವಿಂದನು ತನ್ನ ಮಗಳ ಸಮಾಚಾರವನ್ನು ಹೇಳಿ, "ನಿನ್ನ ಮಗ ಸುಧಾಮನಿಗೆ ನನ್ನ ಮಗಳನ್ನು ಯಾಕೆ ಮಾಡಿಕೊಳ್ಳಬಾರದು ? ಆದರೂ ಸುಧಾಮನಿಗೆ ಯಾರೂ ಹೆಣ್ಣು ಕೊಡಲು ಮುಂದೆಬರುವುದಿಲ್ಲವೆಂದು ಕೇಳಿದೆನು. ಕಾರಣವೇನು ? ಅವನಿಗೆ ದುರಭ್ಯಾಸಗಳಾವುದೂ ಇಲ್ಲವಷ್ಟೇ ? ಅಥವಾ ನೋಡಲಿಕ್ಕೆ ಚೆನ್ನಾಗಿಲ್ಲವೆ ? ಅಂಗವಿಕಲತೆ ಏನಿಲ್ಲವಷ್ಟೆ ?" ಎಂದು ಕೇಳಿದನು.

"ಅದನ್ನೆಲ್ಲ ಅವನ ಹತ್ತಿರ ನೀನೇ ನೋಡಿ ಮಾತಾಡಿ ತಿಳಿದುಕೋ" ಎಂದನು ಆನಂದ ಮುಗುಳು ನಗುತ್ತ.

ಆ ದಿನ ಸಾಯಂಕಾಲ ಗೋವಿಂದನು ಸುಧಾಮನನ್ನು ಪ್ರತ್ಯೇಕವಾಗಿ ನೋಡಿ, "ಒಂದು ಸಣ್ಣ ಸಂಗತಿ. ಮತ್ತೇನೂ ಅಂದುಕೊಳ್ಳಬೇಡ. ನಿನಗೆ ಜೂಜೂ ಕುಡಿತ ಮೊದಲಾದ ಅಲ್ಪಸ್ವಲ್ಪ ಕೆಟ್ಟ ಅಭ್ಯಾಸಗಳೇನೂ ಇಲ್ಲವಷ್ಟೆ ?" ಎಂದು ಕೇಳಿದನು.

"ನನಗೆ ಯಾವ ದುರಭ್ಯಾಸಗಳೂ ಇಲ್ಲ" ಎಂದನು ಸುಧಾಮ.

ಗೋವಿಂದನು ಈ ಸಂಗತಿಯನ್ನು ಆನಂದನೊಂದಿಗೆ ಹೇಳಿದನು.

ಆನಂದನು ಕ್ಷಣ ಕಾಲ ಸುಮ್ಮನಿದ್ದು, "ನನ್ನ ಮಗನಿಗೆ ಇರುವುದು ಒಂದೇ ಒಂದು ದುರಭ್ಯಾಸ, ಸತ್ಯ ಹೇಳದಿರುವುದೇ !" ಎಂದನು.





# ಸೂರ್ಯನೊಂದಿಗೆ ಪಂಥ

ಬ್ರಹ್ಮದತ್ತನು ಕಾಶೀ ರಾಜ್ಯವನ್ನು ಪಾಲಿಸಿಕೊಂಡಿದ್ದ ಕಾಲದಲ್ಲಿ. ಚಿತ್ರಕೂಟ ಪರ್ವತ ಪ್ರಾಂತದಲ್ಲೊಮ್ಮೆ ತೊಂಬತ್ತು ಸಾವಿರ ಹಂಸಗಳು ವಾಸಮಾಡಿಕೊಂಡಿದ್ದುವು. ಆ ಕಾಲದಲ್ಲಿ ಬೋಧಿಸತ್ವನು ಒಂದು ಹಂಸವಾಗಿ ಜನ್ಮವೆತ್ತಿದನು. ಆದುದರಿಂದ ಅದೊಂದು ಹಂಸವು ಉಳಿದೆಲ್ಲ ಹಂಸಗಳಂತಿರಲಿಲ್ಲ. ಅದರಲ್ಲಿ ಅನೇಕ ಸುಗುಣಗಳಿದ್ದುವು. ಅಷ್ಟೇ ಅಲ್ಲದೆ ಅದಕ್ಕೆ ಅಪಾರ ಶಕ್ತಿಯೂ, ವೇಗವೂ ಕೂಡಿದ್ದಿತು. ಈ ಕಾರಣಗಳಿಂದ ಅದು ತೊಂಬತ್ತು ಸಾವಿರ ಹಂಸಗಳಿಗೂ ಹಿರಿಯ ಅಧಿಕಾರಿಯಾಗಿದ್ದಿತು. ಎಲ್ಲಾ ಹಂಸಗಳೂ ಅದು ಹೇಳಿದಂತೆ ಕೇಳುತ್ತಿದ್ದುವು. ಸುಗುಣಶಕ್ತಿ ಸಂಪನ್ನತೆಗಳಿಂದ ಗಂಭೀರವಾಗಿ ಒಪ್ಪುವ ಆ ಹಂಸಕ್ಕೆ 'ರಾಜಹಂಸ' ಎಂಬ ಹೆಸರು ತನ್ನಂತೆ ಬಂದಿತು.

ಒಂದು ದಿನ ಆ ರಾಜಹಂಸವು ತನ್ನ ಗುಂಪಿನೊಂದಿಗೆ ಹೋಗಿ ಎಲ್ಲಿಯೋ ದೂರದ ಸರೋವರದಲ್ಲಿ ವಿಹರಿಸಿ, ತನ್ನ ನಿವಾಸಸ್ಥಾನಕ್ಕೆ ಹಿಂದಿರುಗುತ್ತ ಕಾಶೀ ರಾಜ್ಯದ ಮೇಲಿಂದಾಗಿ ಬರುತ್ತಿತ್ತು. ಬ್ರಹ್ಮಾಂಡದಂತಹ ಆ ಪಕ್ಷಿಗಳ ಗುಂಪನ್ನು ನೋಡಿದರೆ ಕಾಶೀ ರಾಜ್ಯವೆಲ್ಲವೂ ಬಂಗಾರದ ಚಾಂದಿನೀ ಹರಡಿಸಿದಂತೆ ಕಾಣುತ್ತಿತ್ತು.

ಕಾಶೀ ರಾಜನು ಆಶ್ಚರ್ಯದಿಂದ ಆ ಕಡೆಗೆ ನೋಡಿದನು. ಆ ಪಕ್ಷಿಗಳಲ್ಲೆಲ್ಲಾ ತಾರೆಗಳ ನಡುವಿನ ಚಂದ್ರನ ಹಾಗೆ ಬೆಳಗುತ್ತಿರುವ ರಾಜಹಂಸದ ಚಲನೆಯ ಗಾಂಭೀರ್ಯವೂ ಸೌಂದರ್ಯವೂ ರಾಜನನ್ನು ಹೆಚ್ಚಾಗಿ ಆಕರ್ಷಣೆ ಮಾಡಿತು.

ಆ ರಾಜಹಂಸದಲ್ಲಿ ಮಹಾರಾಜನ ಠೀವಿಯೂ, ತೇಜಸ್ಸೂ ಇರುವುದನ್ನು ರಾಜನು ಗಮನಿಸಿದನು. ಸೇವಕರಿಂದ ದಿವ್ಯವಾದ ಪುಷ್ಪಮಾಲಿಕೆಗಳನ್ನೂ ಪೂಜಾದ್ರವ್ಯಗಳನ್ನೂ ತರಿಸಿ, ಅವುಗಳನ್ನು ತೋರಿಸುತ್ತಾ, ರಾಜಹಂಸವನ್ನು ಸನ್ನೆಯಿಂದ ಕರೆದನು. ಅದು ರಾಜನ ಕರೆಯನ್ನು ಅರ್ಥಮಾಡಿಕೊಂಡು ತನ್ನ ಗುಂಪಿನೊಂದಿಗೆ ಅವನ ಮುಂದೆ ಸಾಗಿ ಬಂದು ಎರಗಿತು.

ಕಾಶೀ ರಾಜನು ರಾಜಹಂಸಕ್ಕೆ ಘನರೀತಿಯಲ್ಲಿ ಸ್ವಾಗತೋಪಚಾರ ಮಾಡಿದನು. ರಾಜಹಂಸವು ಅದನ್ನೆಲ್ಲ ಆಪ್ಯಾಯತೆಯಿಂದ ಸ್ವೀಕರಿಸಿಕೊಂಡಿತು. ತನ್ನ ಪರಿವಾರದೊಂದಿಗೆ ಕೆಲವು ದಿನ ಅಲ್ಲಿಯೇ

ಇದ್ದು ಆಮೇಲೆ ತನ್ನ ನಿವಾಸಕ್ಕೆ ಹೊರಟು ಹೋಯಿತು. ಆಗಾಗ ತನ್ನ ರಾಜ್ಯಕ್ಕೆ ಬರಬೇಕೆಂದು ರಾಜನು ಕೇಳಿಕೊಂಡು ಅದನ್ನು ಕಳುಹಿಸಿದನು.

ಆ ಕ್ಷಣದಿಂದ ಕಾಶೀ ರಾಜನಿಗೆ ಆ ರಾಜಹಂಸದ ಮೇಲೆ ಮಮತೆ ಅತಿಶಯವಾಗುತ್ತಾ ಹೋಯಿತು. ಹಗಲೂ ರಾತ್ರಿ ಆ ರಾಜಹಂಸದ್ದೇ ಯೋಚನೆ. ಅದು ತನ್ನ ರಾಜ್ಯದ ಮೇಲೆ ದಿನಾ ಬರುತ್ತಿರ ಬೇಕೆಂಬ ತವಕ. ತಾನೂ ಅದರೊಂದಿಗೆ ಹಂಸ ವಾಗಬೇಕೆಂಬ ಆಶೆ. ಅದು ಯಾವ ಕ್ಷಣದಲ್ಲಿ ಯಾವ ದಿಕ್ಕಿನಿಂದ ಬರುತ್ತದೋ. ಇಂದು ಬರುವುದೋ ನಾಳೆ ಬರುವುದೋ ಎಂದು ಆಗಾಗ ಆಕಾಶದ ಕಡೆ ನೋಡುತ್ತಾ ದಿನಗಳೆ ಯುತ್ತಿದ್ದನು.

ಒಂದು ದಿನ ಚಿತ್ರಕೂಟ ಪರ್ವತ ಪ್ರಾಂತದಲ್ಲಿ ರುವ ಹಂಸಗಳಲ್ಲಿ ಎರಡು ಮುದ್ದು ಬಾಲಹಂಸಗಳು ರಾಜಹಂಸದ ಬಳಿಗೆ ಬಂದು, "ಮಹಾರಾಜಾ! ನಮಗಿಬ್ಬರಿಗೂ ಬಹಳ ದಿನಗಳಿಂದ ಸೂರ್ಯ ನೊಂದಿಗೆ ಪಂದ್ಯ ಕಟ್ಟಬೇಕೆಂದು ಬಹಳ ಆಸೆ ಯಾಗಿದೆ" ಎಂದು ಅವು ತಮ್ಮ ಮನಸ್ಸಿನೊಳಗಿರು ವುದನ್ನು ಹೇಳಿದುವು.

ಅದನ್ನು ಕೇಳಿ ರಾಜಹಂಸವು, ಬಾಲಹಂಸಗಳ ದುಡುಕುಬುದ್ಧಿಗೆ ನಕ್ಕು, "ಲೋ, ಚಿಣ್ಣಾರಿಗಳಿರಾ! ಸೂರ್ಯನೆಂದರೇನು? ನೀವು ಪಂಥ ಕಟ್ಟುವುದೆಂದ ರೇನು? ಎಲ್ಲಾದರೂ ಉಂಟೆ? ಸೂರ್ಯನ ವೇಗ ಎಷ್ಟೆಂಬುದು ನಿಮಗೆ ಗೊತ್ತಿಲ್ಲ. ಆದ್ದರಿಂದಲೇ ಅಜ್ಞಾನದಲ್ಲಿ ಬಿದ್ದಿರುವಿರಿ. ನೀವು ಸೂರ್ಯನೊಂದಿಗೆ ಓಡುವುದಂತೂ ಹಾಗಿರಲಿ, ಆ ಪಂಥದಲ್ಲಿ ನಿಮಗೆ ಘಾತಗಳೂ, ಪ್ರಾಣಾಪಾಯಗಳೂ ಬರುತ್ತವೆ. ಆದ್ದರಿಂದ ನೀವಿಬ್ಬರೂ ನಿಮ್ಮ ಹುಚ್ಚು ಊಹೆಗಳನ್ನು ಕಟ್ಟಿ ಮೂಲೆಗೆ ಹಾಕಿ, ನಿಮ್ಮ ಪಾಡಿಗೆ ಆಡಿಕೊಂಡಿರಿ" ಎಂದು ಹಿತವಾದ ಹೇಳಿತು.



ಹಂಸ ಬಾಲರಿಗೆ ಆ ಹಿತವಚನ ಹಿಡಿಸಲಿಲ್ಲ. ಮತ್ತೊಂದು ದಿನ ಮತ್ತೊಮ್ಮೆ ರಾಜಹಂಸದ ಬಳಿಗೆ ಬಂದು ಅನುಮತಿ ಕೇಳಿದುವು. ಈ ಸಾರಿ ಕೂಡಾ ಹಾಗೆಯೇ ಬುದ್ಧಿ ಹೇಳಿತು ರಾಜಹಂಸ.

ಅಷ್ಟರಿಂದಾದರೂ ಆ ಬಾಲಹಂಸಗಳು ಸುಮ್ಮ ನಿದ್ದರೆ ತಾನೇ? ಮತ್ತೊಮ್ಮೆ ಅನುಮತಿ ಕೇಳಿದುವು, ರಾಜಹಂಸ ಸುತರಾಂ ಕೊಡದೆಂದಿತು.

ಇನ್ನು ಹೇಳಿ ಕೇಳಿ ಪ್ರಯೋಜನವಿಲ್ಲವೆಂದು ಕೊಂಡು, ಆ ಎರಡು ಹಂಸಪೋರಗಳು ಯಜಮಾನ ನಿಗೆ ಗೊತ್ತಾಗದ ಹಾಗೆ ಯುಗಂಧರ ಪರ್ವತ ಶಿಖರಕ್ಕೆ ಹಾರಿಹೋದುವು. ಈ ಶಿಖರವು ಸೂರ್ಯ ಮಂಡಲವನ್ನು ಮುಟ್ಟುವುದೋ ಎಂಬಷ್ಟು ಎತ್ತರ ವಾಗಿತ್ತು. ಆದುದರಿಂದ ಆ ದೊಡ್ಡ ಪರ್ವತ ಶಿಖರದ ಮೇಲೆ ಸೇರಿ, ಸೂರ್ಯನೊಂದಿಗೆ ಪಂಥ ಕಟ್ಟಬಹುದೆಂದು ಆ ಬಾಲಹಂಸಗಳ ನಂಬುಗೆ. ಎಂದಿನಂತೆ ರಾಜಹಂಸವು ತನ್ನ ಪರಿವಾರವನ್ನು



ಲೆಕ್ಕ ನೋಡಿಕೊಳ್ಳುವಾಗ, ಎರಡು ಹಂಸಗಳು ಕಡಿಮೆಯಾಗಿದ್ದುವು. ನಡೆದ ಸಂಗತಿ ಏನೆಂದು ಊಹಿಸಿ, ಬಹಳವಾಗಿ ಚಿಂತಿಸಿತು. ಇನ್ನು ಚಿಂತಿಸಿ ಲಾಭವೇನು! ಅವುಗಳನ್ನು ಹೇಗಾದರೂ ರಕ್ಷಿಸಬೇಕೆಂದು ನಿಶ್ಚಯಿಸಿತು.

ಕೂಡಲೇ ರಾಜಹಂಸವು ಉನ್ನತವಾದ ಯುಗಂಧರ ಪರ್ವತ ಶಿಖರಕ್ಕೆ ಹೋಗಿ, ಬಾಲಹಂಸಗಳಿಗೆ ಗೊತ್ತಾಗದ ಹಾಗೆ ಒಂದು ಕಡೆಯಲ್ಲಿ ಅಡಗಿ ಕುಳಿತಿತು. ಸರ್ಯೋದಯವಾದ ಕೂಡಲೇ ಹಂಸ ಬಾಲರು ಸೂರ್ಯನ ಕಡೆಗೆ ಹಾರತೊಡಗಿದುವು. ರಾಜಹಂಸ ಕೂಡಾ ಅವುಗಳನ್ನು ಅನುಸರಿಸಿಕೊಂಡು ಹೋಯಿತು.

ಹಾರುತ್ತಾ ಇದ್ದ ಎರಡು ಹಂಸ ಬಾಲರಲ್ಲಿ ಸಣ್ಣದು ಮಧ್ಯಾಹ್ನದವರೆಗೂ ಹಾರಿತು. ಆಗ ರೆಕ್ಕೆಗಳಲ್ಲಿ ಉರಿ ಪ್ರಾರಂಭವಾಗಿ ರೆಕ್ಕೆ ಆಡಿಸಲಾಗದೆ ಸೋತು ಬೀಳತೊಡಗಿತು.

ಆಗ ಅದು ರಾಜಹಂಸವನ್ನು ನೋಡಿ, "ರಾಜಾ, ನನ್ನಿಂದಾಗಲಿಲ್ಲ. ಬೀಳುತ್ತಾ ಇದ್ದೇನೆ. ನಿಮ್ಮ ಮಾತು ಕೇಳದೆ ಕೆಟ್ಟೆ!" ಎಂದಿತು ನಿರಾಶೆಯಿಂದ.

"ಹೆದರಬೇಡ, ನಾನಿದ್ದೇನಲ್ಲಾ!" ಎನ್ನುತ್ತ ರಾಜಹಂಸವು ಒಳ್ಳೆಯ ಮಾತುಗಳಿಂದ ಅದನ್ನು ತನ್ನ ರೆಕ್ಕೆಯ ಮೇಲೆ ಹಿಡಿದುಕೊಂಡು, ಭದ್ರವಾಗಿ ಕೆಳಗೆ ತಂದು ತಮ್ಮ ನಿವಾಸಸ್ಥಾನದ ಉಳಿದ ಹಂಸಗಳ ಗುಂಪಿನಲ್ಲಿ ಸೇರಿಸಿತು.

ಹಾಗು ಮತ್ತೆ ಅತಿವೇಗದಿಂದ ಹಾರಿಹೋಯಿತು ರಾಜಹಂಸ. ಅಷ್ಟರಲ್ಲಿ ಎರಡನೇ ಬಾಲಹಂಸವೂ ಸೋತು ಸುಣ್ಣವಾಗಿ ಬಿಸಿ ಕಿರಣಗಳ ಬಾಧೆಯಿಂದ ಹಾರಲಾಗದೆ ಬೀಳತ್ತ, ರಾಜಹಂಸವನ್ನು ನೋಡಿ, ದೀನಾಲಾಪ ಮಾಡಿತು. ರಾಜಹಂಸವು ಅದಕ್ಕೆ ಕೂಡಾ ಧೈರ್ಯವನ್ನು ಹೇಳಿ, ತನ್ನ ರೆಕ್ಕೆಯ ಮೇಲೆ ಕೂಡಿಸಿಕೊಂಡು ಚಿತ್ರಕೂಟದಲ್ಲಿರುವ ಗುಂಪಿಗೆ ತಂದು ಸೇರಿಸಿತು.

ಈ ರೀತಿಯಾಗಿ ತನ್ನ ಪರಿವಾರದೊಳಗಿನ ಎರಡು ಪಕ್ಷಿಗಳು ಸೋತುಹೋದುದನ್ನು ರಾಜಹಂಸಕ್ಕೆ ಸಹಿಸಲಾಗಲಿಲ್ಲ. ತಾನೇ ಏಕೆ ಪಂಥ ಕಟ್ಟಬಾರದು? ಬಾಲಕರು ಅಷ್ಟೆತ್ತರಕ್ಕೆ ಹಾರಿದರೆ, ತಾನು ಅದಕ್ಕಿಂತ ಮೇಲೆ ಹಾರಲಾರೆನೆ? ಬೇಡವೆಂದರೂ ಕೇಳದೆ ಬಾಲಬುದ್ಧಿಯವರು ಸೋತರೆಂದರೆ, ಸೋಲು ಎಂಬ ಕೀಳು ಹೆಸರು ಹಂಸ ಜಾತಿಗೆ ಬರಕೂಡದು. ಆದುದರಿಂದ ತಾನೇ ಹೊರಡುವೆನೆಂದುಕೊಂಡು ರಾಜಹಂಸವು ತನ್ನ ಸಹಜ ವೇಗವನ್ನು ಕೈಕೊಂಡು ಸೂರ್ಯನ ಕಡೆಗೆ ಹಾರಿತು. ಹಾರಲು ಪ್ರಾರಂಭಿಸಿ, ಸ್ವಲ್ಪ ಹೊತ್ತಿನೊಳಗೇ ಅದು ಸೂರ್ಯಬಿಂಬವನ್ನು ಅತಿಕ್ರಮಿಸಿಯೂ ಮೇಲೆ ಹೋಯಿತು. ಅದರಿಂದ ಸೂರ್ಯನ ಶಕ್ತಿ ಎಂತಹುದೆಂದು ಅದಕ್ಕೆ ತಿಳಿಯಿತು. ಇಂತಹ ಪಂದ್ಯದಿಂದ ಲಾಭವೇನಿಲ್ಲದಿದ್ದರೂ, ಗೆದ್ದ ತೃಪ್ತಿಯೊಂದು ಅದಕ್ಕೆ ಆಯಿತು.

ಹೀಗೆ ಸ್ವಲ್ಪ ಹೊತ್ತು ಸೂರ್ಯಬಿಂಬವನ್ನು ಸುತ್ತಿ, ದಣಿದ ಮೇಲೆ ಭೂಲೋಕಕ್ಕೆ ಇಳಿದು ಕಾಶೀ ರಾಜ್ಯಕ್ಕೆ ಬಂದಿತು. ದಿನಾ ಅದರ ಬರುವಿಕೆಯನ್ನೇ ಇದಿರು ನೋಡಿಕೊಂಡಿದ್ದ ರಾಜನು ಹೀಗೆ ಬಂದ ರಾಜಹಂಸವನ್ನು ನೋಡಿದ ಕೂಡಲೇ ಆನಂದದಲ್ಲಿ ತನ್ಮಯನಾದನು.

ಅವನು ರಾಜಹಂಸವನ್ನು ತನ್ನ ಬಂಗಾರದ ಸಿಂಹಾಸನದ ಮೇಲೆ ಕುಳ್ಳಿರಿಸಿ, ಬಂಗಾರದ ತಾಟು ಗಳಲ್ಲಿ ಪಾಯಸವನ್ನೂ, ಬಂಗಾರದ ಕಲಶದಲ್ಲಿ ತಣ್ಣಗಿನ ಪಾನಕವನ್ನೂ ತಂದು ಅದರ ಮುಂದಿಟ್ಟನು. ತುಂಬಾ ದಣಿದ ರಾಜಹಂಸವು ಅವುಗಳನ್ನು ಸ್ವೀಕರಿಸಿ ಸ್ಥಿಮಿತಕ್ಕೆ ಬಂದ ಮೇಲೆ, .ರಾಜನು ಕುಶಲ ಪ್ರಶ್ನೆ ಗಳನ್ನು ಪ್ರಾರಂಭಿಸಿದನು.

ಹಂಸಬಾಲರ ಹುಡುಗಾಟದಿಂದ ನಡೆದ ಸಮಾ ಚಾರವನ್ನೆಲ್ಲಾ ಹೇಳಿ, "ಆ ನನ್ನ ದಣಿವೆಲ್ಲಾ ನಿನ್ನ ಉಪಚಾರದಿಂದ ತೀರಿತು. ಇನ್ನು ನಿನ್ನನ್ನು ಮರೆಯ ಲಾರೆ" ಎಂದಿತು ರಾಜಹಂಸ.

ಅದನ್ನೆಲ್ಲ ಕೇಳಿ ರಾಜನು, "ಪಕ್ಷಿರಾಜಾ, ಸೂರ್ಯ ನೊಂದಿಗೆ ಪಂಥಕಟ್ಟಿ, ಅವನನ್ನು ಮೀರಿಸಿದ ನಿನ್ನ ಸತ್ವ ಎಷ್ಟರಮಟ್ಟಿನದೋ ಕಣ್ಣಾರೆ ನೋಡಬೇಕೆಂ ದಿದೆ" ಎಂದನು.

"ಹಾಗೆ ನಿನಗೆ ನೋಡಬೇಕೆಂದಿದ್ದರೆ, ರಾಜಾ, ನಿನ್ನ ರಾಜ್ಯದಲ್ಲಿ ಮಿಂಚಿನ ವೇಗದಲ್ಲಿ ಬಾಣ ಬಿಡುವಂತಹ ಬಿಲ್ಲುಗಾರರಿದ್ದರೆ ಅಂತಹ ನಾಲ್ವರನ್ನು ಇಲ್ಲಿಗೆ ಬರ ಮಾಡು" ಎಂದಿತು. ರಾಜನು ಬಿಲ್ಲುಗಾರರನ್ನು ತರಿಸಿದನು.

ಉದ್ಯಾನದಲ್ಲಿ ನಾಲ್ಕುಬದಿ ಚೌಕವಾದ ಒಂದು ಕಂಬವಿದ್ದಿತು. ನಾಲ್ಕು ಮಂದಿ ಬಿಲ್ಲುಗಾರರನ್ನು ಆ ಕಂಬದ ನಾಲ್ಕು ದಿಕ್ಕುಗಳಲ್ಲಿ ಒಬ್ಬೊಬ್ಬನನ್ನು ನಿಲ್ಲಿಸಿತು ರಾಜಹಂಸ. ಆಮೇಲೆ ತನ್ನ ಕೊರಳಿಗೆ ಒಂದು ಗಂಟೆ ಕಟ್ಟಿಕೊಂಡು ಕಂಬದ ಮೇಲೆ ಕುಳಿತು ಕೊಂಡಿತು.

"ನಾನು ಸಂಜ್ಞೆ ಮಾಡಿದ ಕೂಡಲೇ ನೀವು ನಾಲ್ವರೂ ಒಂದೇ ಸಾರಿ ಕಂಬದ ಕಡೆಗೆ ಬಾಣಗಳನ್ನು



ಬಿಡಬೇಕು. ನಾನು ಹಾರಿಹೋಗಿ ನಿಮ್ಮ ಒಬ್ಬೊಬ್ಬರ ಬಾಣವನ್ನೇ ತಂದು ನಿಮ್ಮ ಮುಂದೆ ಇಡುತ್ತೇನೆ. ಆದರೆ ನನ್ನ ಕುತ್ತಿಗೆಯಲ್ಲಿರುವ ಗಂಟೆಯ ಶಬ್ದ ದಿಂದಲೇ ನೀವು ನನ್ನ ಗಮನವನ್ನು ತಿಳಿದುಕೊಳ್ಳ ಬಹುದೇ ಹೊರತು. ನನ್ನನ್ನು ಕಣ್ಣಿನಿಂದ ನೋಡಲು ನಿಮಗೆ ಎಂದಿಗೂ ಸಾಧ್ಯವಾಗದು " ಎಂದು ಹೇಳಿತು ರಾಜಹಂಸ.

ಆ ಪ್ರಕಾರವೇ ಮಿಂಚು ಮಿಂಚಿದ ಹಾಗೆ ಬಿಲ್ಲು ಗಾರರು ಬಿಟ್ಟ ನಾಲ್ಕು ಬಾಣಗಳನ್ನೂ ಆಕಾಶ ದಲ್ಲಿಯೇ ಹಿಡಿದು ತಂದು ರಾಜಹಂಸವು ಅವರವರ ಮುಂದೆ ಹಾಕಿತು.

ರಾಜನೂ ಅವನ ಪರಿವಾರದವರೂ ಆತ್ಯಾಶ್ಚರ್ಯ ಪಟ್ಟರು. " ರಾಜಾ ! ನೋಡಿದೆಯಾ ನನ್ನ ವೇಗ ವನ್ನು ! ಇದು ನಾನು ಬಹು ಮೆಲ್ಲಗೆ ಹಾರಿದಂತಹ ಕನಿಷ್ಟ ವೇಗ ಅಷ್ಟೇ. ಇದರಿಂದ ನನ್ನ ನಿಜವೇಗ ವೆಂಬುದು ಹೇಗಿರುವುದೆಂದು ಸಾಧ್ಯವಾದರೆ ಊಹಿಸಿ ನೋಡು " ಎಂದಿತು.

ಆತುರದಿಂದ ರಾಜನು, " ಪಕ್ಷಿರಾಜಾ, ನಿನ್ನ ವೇಗವು ಎಂತಹುದೆಂದು ಮಾದರಿ ಮಾತ್ರ ನೋಡಿ ದೆನು. ಇದಕ್ಕೆ ಮಿಂಚಿದ ವೇಗವು ಬೇರೆ ಯಾರಿ ಗಾದರೂ ಇದೆಯೇ ? " ಎಂದು ಪ್ರಶ್ನಿಸಿದನು. ಅದಕ್ಕೆ ರಾಜಹಂಸವು, " ಇಲ್ಲದೆ ಏನು ? ನಾನು ನನ್ನ ಶಕ್ತಿಯನ್ನೆಲ್ಲಾ ವಿನಿಯೋಗಿಸಿ ಕಡೇ ಪಕ್ಷದ ವೇಗದಿಂದ ಹಾರಿದರೂ, ನನಗಿಂತ ಸಾವಿರಪಾಲು ವೇಗದಿಂದ ಓಡುವ ಮಹಾ ಶಕ್ತಿಯೊಂದಿದೆ. ಅದೇ ಕಾಲವೆಂಬ ಸರ್ಪ. ಆ ಕಾಲಸರ್ಪವು ಅನುಕ್ಷಣವೂ ಈ ಪ್ರಪಂಚದೊಳಗಿನ ಪ್ರಾಣಿಗಳನ್ನು ವರ್ಣಿಸಲಾಗ ದಷ್ಟು ಪ್ರಚಂಡ ವೇಗದಿಂದ ನಾಶಮಾಡುತ್ತಾ ಇದೆ " ಎಂದು ಹೇಳುವಷ್ಟರಲ್ಲಿ ರಾಜನು ಭೀತಿಯಿಂದ ನಡುಗತೊಡಗಿದನು.

ಆಗ ರಾಜಹಂಸದ ರೂಪದಲ್ಲಿರುವ ಬೋಧಿ ಸತ್ವನು ರಾಜನನ್ನು ಸಮಾಧಾನಪಡಿಸುತ್ತ, " ರಾಜಾ, ಕಾಲಸರ್ಪವೊಂದು ಇರುವುದೆಂಬ ಮಾತನ್ನು ನೆನಪಿಟ್ಟುಕೊಳ್ಳುವವರಿಗೆ ಯಾವ ಭಯವೂ ಇಲ್ಲ. ನೀತಿವಂತನಾಗಿ, ಧರ್ಮಾತ್ಮನಾಗಿ ಪರಿಪಾಲನೆ ಸಾಗಿಸಿ ಕೊಂಡಿರುವವರೆಗೂ ನಿನಗೆ ಯಾರಿಂದಲೂ ಯಾವ ಭಯವೂ ಇಲ್ಲ. ಆದುದರಿಂದ ನೀನು ನಿನ್ನ ವಿಧಿ ಗಳನ್ನು ಕ್ರಮತಪ್ಪದೆ ನೆರವೇರಿಸಿಕೊಂಡಿರುವಾಗ, ಅದು ನಿನ್ನನ್ನು ಸ್ಪರ್ಶಿಸಿಕೊಂಡೇ ಇದ್ದರೂ ಅದು ಮೃದುವಾದ ಸುಖ ಸ್ಪರ್ಶವೇ ಆಗಿ ನಿನ್ನನ್ನು ದೀರ್ಘಾಯುಷಿಯನ್ನಾಗಿ ಮಾಡುತ್ತದೆ " ಎಂದು ತತ್ವಬೋಧೆ ಮಾಡಿದನು.

ಹಾಗೆಯೇ ಧರ್ಮ ಪರಿಪಾಲನೆಯಿಂದ ಕಾಶೀ ರಾಜನು ದೊಡ್ಡ ಕೀರ್ತಿಗೆ ಭಾಜನದನು.





# ಬೆಂಟಿಂಕ್, ಡಲ್ಹೌಸೀ

ಹತ್ತೊಂಬತ್ತನೆಯ ಶತಮಾನದ ಪ್ರಾರಂಭದಲ್ಲಿ ಬ್ರಿಟಿಷರು ಭಾರತದೇಶದಲ್ಲಿ ತಮ್ಮ ಅಧಿಕಾರವನ್ನು ಸುಸ್ಥಿರ ಮಾಡಿಕೊಳ್ಳಲು ಗಟ್ಟಿ ಪ್ರಯತ್ನಕ್ಕೆ ತೊಡಗಿದರು. ಸ್ವದೇಶ ಪಾಲಕರ ಅಧಿಪತ್ಯವು ಸಣ್ಣದಾಗುತ್ತಾ ಬಂದಿತು. ಮಧ್ಯ ಭಾರತದೇಶದಲ್ಲಿ ಪಿಂಡಾರಿಗಳೆಂಬ ದರೋಡೆ ಕಳ್ಳರು ಊರುಗಳ ಮೇಲೆ ಬಿದ್ದು ದೋಚಿಕೊಂಡು ಅಲ್ಲಕಲ್ಲೋಲ ಸೃಷ್ಟಿಸುತ್ತಿದ್ದರು.

ಪಿಂಡಾರಿಗಳನ್ನು ಅಡಗಿಸಲಿಕ್ಕೆ ಬ್ರಿಟಿಷ್ ಸೈನ್ಯವು ಗಟ್ಟಿಯಾಗಿ ಹಟತೊಟ್ಟಿತು. ಕಡೆಗೆ ಪಿಂಡಾರಿಗಳ ನಾಯಕನಾದ ಪಠಾಣ್ ಅಮೀರ್‌ಖಾನ್, ಆಂಗ್ಲೇಯರ ಅಧಿಕಾರವನ್ನು ಅಂಗೀಕರಿಸಿಕೊಂಡನು. ಅವನು ಟೋಂಕ್‌ಗೆ ನವಾಬನಾದನು. ಚಿಟ್ಟೂ ಎಂಬ ಮತ್ತೊಬ್ಬ ನಾಯಕನು ಅಡವಿಯೊಳಗೆ ಓಡಿ ಹೋಗಿ, ಅಲ್ಲಿ ಹೆಬ್ಬುಲಿಯ ಬಾಯಿಗೆ ಬಿದ್ದನು.





ಗಂಡನು ಸತ್ತು, ಹೋದರೆ ಹೆಂಡತಿ ಅದೇ ಚಿತಿಯ ಮೇಲೆ ಸಹಗಮನ ಮಾಡುವ ಆಚಾರವು ಅಲ್ಲಲ್ಲಿ ಇದ್ದಿತು. ಮೊದಲು ಭಕ್ತಿಯಿಂದ, ವಿಶ್ವಾಸದಿಂದ ಪ್ರಾರಂಭವಾದ ಈ ಆಚಾರವು ಕ್ರಮವಾಗಿ ಒಂದು ನಿರ್ಬಂಧವಾಗಿ, ಸಾಮಾಜಿಕ ದುರಾಚಾರವಾಗಿ ಮಾರ್ಪಟ್ಟಿತು. ಈ ದುರಾಚಾರವನ್ನು ನಿಷೇಧಿಸುವ ಶಾಸನವನ್ನು ತಂದನು ಬೆಂಟಿಂಕ್ ಪ್ರಭು.



ದೇಶದೊಳಗಿನ ವಿವಿಧ ಪ್ರಾಂತಗಳಲ್ಲಿ ಥಗ್ಗರು ಎಂಬ ಡಕಾಯಿತರ ಗುಂಪು ಪ್ರಬಲಿಸಿ, ದಾರಿ ಹೋಕರ ಮೇಲೆ ದಾಳಿ ನಡೆಸಿ ದೋಚಿ ಕೊಳ್ಳುತ್ತಿದ್ದರು. ಬೆಂಟಿಂಕ್ ಪ್ರಭು ಥಗ್ಗರನ್ನು ಕೂಡಾ ಜಯಪ್ರದವಾಗಿ ಅಡಗಿಸಿ ಬಿಟ್ಟನು.

ಕೆಲವು ಪ್ರಾಂತಗಳಲ್ಲಿ ಪೈರು ಚೆನ್ನಾಗಿ ಬರ ಬೇಕೆಂದು ನರಬಲಿ ಕೊಡುವ ದುರಾಚಾರವಿದ್ದಿತು. ಈ ದುರಾಚಾರವನ್ನು ಕೂಡಾ ನಿರ್ನಾಮ ಮಾಡಲು ಬೆಂಟಿಂಕ್ ಪ್ರಭು ಕಠಿಣವಾವ ಪ್ರವರ್ತನೆಯನ್ನು ಕೈಕೊಂಡು ದೊಡ್ಡದೊಂದು ಸಂಸ್ಕರಣವನ್ನು ಶಂದವನೆಂದು ಹೆಸರು ಪಡೆದನು.





ಭಾರತೀಯ ಪರಿಪಾಲಕರೆಲ್ಲರೂ ತಮ್ಮ ಅಧಿಕಾರವನ್ನು ಕಳೆದುಕೊಳ್ಳುತ್ತಿದ್ದ ಸಮಯ ದಲ್ಲಿ, ಪಂಜಾಬಿನಲ್ಲಿ ಮಹಾರಾಜಾ ರಂಜಿತ್ ಸಿಂಗ್ ಚೆನ್ನಾಗಿ ಬಲಿಷ್ಠನಾಗ ತೊಡಗಿದನು. ಅವನ ನಾಯಕತ್ವದಲ್ಲಿ ಸಿಖ್ಖರೆಲ್ಲರೂ ಐಕಮತ್ಯ ದಿಂದ ಪ್ರವರ್ತಿಸುತ್ತಿದ್ದರು. ದೂರದೃಷ್ಟಿಯುಳ್ಳ ರಂಜಿತ್‌ಸಿಂಗ್ ಬ್ರಿಟಿಷರೊಂದಿಗೆ ಸ್ನೇಹಬಂಧ ಗಳನ್ನು ಹೆಚ್ಚುಗೊಳಿಸುತ್ತಾ ಬಂದನು.

೧೮೪೮ನೆಯ ವರ್ಷದಲ್ಲಿ ಡಲ್ಹೌಸೀ ಪ್ರಭು ಭಾರತ ದೇಶಕ್ಕೆ ಗವರ್ನರ್ ಜನರಲ್ ಆದನು. ರಂಜಿತ್‌ಸಿಂಗ್ ತೀರಿಹೋದಮೇಲೆ, ಸಿಕ್ಖರಿಗೂ ಬ್ರಿಟಿಷ್‌ರಿಗೂ ನಡುವೆ ಯುದ್ಧಗಳು ಪ್ರಾರಂಭವಾದುವು. ಡಲ್ಹೌಸೀ ಪಂಜಾಬನ್ನು ಬ್ರಿಟಿಷ್ ಇಂಡಿಯಾ ದೊಂದಿಗೆ ಸೇರಿಸಿ, ಪೇಷಾವರಿನಿಂದ ಬರ್ಮಾದವರೆಗೆ ಬ್ರಿಟಿಷ್ ಸಾಮ್ರಾಜ್ಯವನ್ನು ವಿಸ್ತರಿಸಿದನು.





ಪುತ್ರರಿಲ್ಲದ ಪರಿಪಾಲಕರ ರಾಜ್ಯಗಳು ಈಸ್ಟ್ ಇಂಡಿಯಾ ಕಂಪೆನಿಗೇ ಸೇರುತ್ತವೆಂಬ ಶಾಸನವನ್ನು ಮಾಡಿದನು ಡಲ್ಹೌಸಿ. ಈ ಶಾಸನವು ಭಾರತೀಯ ಸಂಪ್ರದಾಯಕ್ಕೆ ವಿರುದ್ಧವಾದುದೆಂದೂ, ಅದು ಪರಿಪಾಲಕರನ್ನು ಅವಮಾನ ಪಡಿಸುವಂತಹುದೆಂದೂ. ಅವನು ತಿಳಿದುಕೊಳ್ಳಲು ತಪ್ಪಿದನು.

ಈ ನಿರಂಕುಶ ಶಾಸನದ ಮೂಲಕ ನಾಗಪೂರ್, ಸಂಬಲ್‌ಪೂರ್, ಸತಾರಾ ರಾಜ್ಯಗಳು ಬ್ರಿಟಿಷರ ಹಸ್ತಗತವಾದುವು. ೧೮೫೩ನೇ ವರ್ಷದಲ್ಲಿ ಝಾನ್ಸಿ ರಾಜನಾದ ಗಂಗಾಧರರಾವ್ ರಾಣಿ ಲಕ್ಷ್ಮೀಬಾಯಿಯ ಸಮಕ್ಷಮದಲ್ಲಿ ಪುತ್ರನನ್ನು ದತ್ತಕ್ಕೆ ತೆಗೆದುಕೊಂಡಮೇಲೆ ಕಣ್ಣು ಮುಚ್ಚಿದನು. ಆದರೂ ಝಾನ್ಸೀ ರಾಜ್ಯವು ಬ್ರಿಟಿಷರಿಗೆ ಸೇರುತ್ತದೆಂದು ಡಲ್ಹೌಸೀ ಪ್ರಕಟಿಸಿದನು.





ಆದೇ ಸಂವತ್ಸರದಲ್ಲಿ ಮಹಾರಾಷ್ಟ್ರದ ಪಾಲಕನಾದ ಎರಡನೆಯ ಪೇಷ್ವಾ ಬಾಜೀರಾವ್‌ನ ದತ್ತ ಪುತ್ರನಾದ ನಾನಾಸಾಹೇಬನನ್ನು ಮಹಾರಾಷ್ಟ್ರ ರಾಜ್ಯದ ವಾರಸುದಾರನೆಂದು ಒಪ್ಪಿಕೊಳ್ಳಲಿಕ್ಕೆ ಡಲ್ಹೌಸೀ ನಿರಾಕರಿಸಿದನು. ಆ ಕಾರಣದಿಂದ ನಾನಾಸಾಹೇಬನು ಬ್ರಿಟಿಷರಿಗೆ ಪ್ರಬಲ ಶತ್ರುವಾದನು.

ಡಲ್ಹೌಸೀ ತೀವ್ರವಾದ ಸಾಮ್ರಾಜ್ಯವಾದಿಯಾಗಿದ್ದರೂ ದೇಶದ ಅಭಿವೃದ್ಧಿಯ ಬಗೆಗೆ ಬಹಳ ಉತ್ಸಾಹವನ್ನು ತೋರಿಸಿದನು. ಅವನ ಕಾರ್ಯಗಳ ಫಲಿತವಾಗಿಯೇ ಭಾರತದೇಶದಲ್ಲಿ ಮೊತ್ತಮೊದಲು ೧೮೫೩ ರಲ್ಲಿ ಬೊಂಬಾಯಿಯಿಂದ ಥಾನಾದ ನಡುವಿನಲ್ಲಿ ರೈಲುದಾರಿ ಹಾಕಲಾಯಿತು.





ನಮ್ಮ ದೇಶದಲ್ಲಿ ತಂತೀ ವಿಧಾನವನ್ನು ಪ್ರವೇಶ ಮಾಡಿಸಿದುದು ಮಾತ್ರವಲ್ಲದೆ, ದೇಶವೆಲ್ಲಕ್ಕೂ ವರ್ತಿಸುವಹಾಗೆ ಆಧಾಣೆಯ ಅಂಚೆಯರುಸುಮನ್ನು ಅಮಲುಗೊಳಿಸಿದನು ಡಲ್ಹೌಸಿ. ಕಲಕತ್ತಾ, ಬೊಂಬಾಯಿ, ಮದ್ರಾಸು ವಿಶ್ವವಿದ್ಯಾಲಯಗಳ ಸ್ಥಾಪನೆಗೆ ಕೂಡಾ ಡಲ್ಹೌಸೀ ಬಹಳ ಕೆಲಸ ಮಾಡಿದನು.




# ನಾನು ಮೂರ್ಖನೇ!

ಅನೇಕ ನೂರು ವರ್ಷಗಳ ಹಿಂದೆ ಒಂದು ಊರಿನಲ್ಲಿ ಶಿಲಾಮುಖನೆಂಬ ಒಬ್ಬ ಹಣ್ಣುಗಳ ಸಾವುಕಾರನಿದ್ದನು. ಅವನು ವ್ಯಾಪಾರದಲ್ಲಿ ಒಳ್ಳೆಯ ಲಾಭಗಳಿಸಿ ದೊಡ್ಡ ಧನಿಕನಾದುದು ಮಾತ್ರವಲ್ಲದೆ, ಫಲವೃಕ್ಷಗಳು ತುಂಬಿದ ದೊಡ್ಡದೊಂದು ತೋಟವೂ ಅವನಿಗಿತ್ತು.

ವಿಸ್ತಾರವಾಗಿ ಹರಡಿಕೊಂಡಿದ್ದ ಅವನ ತೋಟದ ಒಂದು ಮೂಲೆಯಲ್ಲಿ ಒಂದು ಗುಡಿಸಲು ಕಟ್ಟಿಕೊಂಡು ಅದರಲ್ಲಿ ಅವನು ವಾಸಮಾಡಿಕೊಂಡಿದ್ದನು. ತಾನು ಬದುಕಲಿಕ್ಕೆ ಬೇಕಾದಷ್ಟೇ ತಿಂದುಕೊಂಡು ಉಳಿದ ಹಣವನ್ನೆಲ್ಲಾ ಹುಗಿದು ಭದ್ರಪಡಿಸಿಕೊಳ್ಳುತ್ತಿದ್ದನು. ಹೆಂಡತಿ ಮಕ್ಕಳನ್ನು ಕೂಡಾ ತನ್ನ ಹಾಗೆಯೇ ಮಾಡಿಕೊಂಡಿದ್ದನು.

ಶಿಲಾಮುಖನು ಒಣಗಿ ಗಟ್ಟಿಕಟ್ಟಿ ಹೋದಂತಹ ಜಿಪುಣ. ತೋಟದಲ್ಲಿ ಸಿಗುವ ಅಷ್ಟೂ ಫಲಗಳನ್ನು ತಾನೂ ತಿನ್ನಲಾರ. ಇತರರಿಗೂ ಕೊಡಲಾರ. ಹೆಂಡತಿ ಮಕ್ಕಳು ತಿಂದರೂ ಅದರ ಬೆಲೆ ಲೆಕ್ಕಕ್ಕೆ ಹಿಡಿಯುತ್ತಿದ್ದ. ದಾನಧರ್ಮಗಳೆಂದರೆ ಏನೆಂಬುದೇ ಅವನಿಗೆ ತಿಳಿಯದು.

ಒಂದು ಸಾರಿ ಮರಗಳ ಕಾಯಿಗಳನ್ನು ಕೊಯ್ಯಲು ಕೂಲಿಯಾಳುಗಳನ್ನು ನಿಯಮಿಸಿದನು ಶಿಲಾಮುಖ. ಆಳುಗಳು ಬೆಳೆದ ಕಾಯಿಗಳನ್ನು ಕೊಯಿದು ನೆಲಕ್ಕಿಳಿಸುತ್ತಿದ್ದರು. ಕೆಲವರು ದೊಡ್ಡದು ಬೇರೆ ಸಣ್ಣದು ಬೇರೆ ಮಾಡುತ್ತಿದ್ದರು...

ಶಿಲಾಮುಖನು ಜಾಗರೂಕತೆಯಿಂದ ಎರಡು ಕಣ್ಣುಗಳಿಂದಲೂ ಪರೀಕ್ಷಿಸಿಕೊಂಡಿದ್ದನು. ಅವನ ಬಾಯಿ ತಪ್ಪಿ ಬೀಳದಂತೆ ಲೆಕ್ಕ ಮಾಡುತ್ತಿತ್ತು. ಪಾವಲಿಗಳ ಹಣ್ಣು, ಅರ್ಧ ರೂಪಾಯಿಯವು, ಮುಕ್ಕಾಲು ರೂಪಾಯಿಯವು, ದೊಡ್ಡವು ಒಂದು ರೂಪಾಯಿಯವು. ಈ ಲೆಕ್ಕ ಪ್ರಕಾರ ಪಾವಲಿಯ ರಾಶಿಯಲ್ಲೆಷ್ಟಿವೆ ? ಅರ್ಧ ರೂಪಾಯಿಯ ರಾಶಿಯಲ್ಲಿ ಇರುವುದೆಷ್ಟು? ಹೀಗೆ ಗುಣಿಸುತ್ತಿದ್ದನು ಶಿಲಾಮುಖ.

ಆ ಸಮಯದಲ್ಲಿ ಕೂಲಿಯವನೊಬ್ಬನು ಮನಸ್ಸು ಕೇಳದೆ ಒಂದು ದೋರೆಗಾಯಿಯನ್ನು ಕಚ್ಚಿ ತಿನ್ನುವುದು ಶಿಲಾಮುಖನ ಕಣ್ಣಿಗೆ ಬಿತ್ತು.

"ಏನೋ ಇದು ಕೆಲಸ ? ಅದರ ಬೆಲೆ ಒಂದು ರೂಪಾಯಿ. ನಿನ್ನ ಕೂಲೀ ಅರ್ಧ ರೂಪಾಯಿ. ನಾಳೆ ಕೂಡಾ ನೀನುಬಂದು ಕೆಲಸ ಮಾಡಿ ಬಾಕಿ ತೀರಿಸ




ಬೇಕು ನೆನಪಿಟ್ಟುಕೋ!" ಎಂದು ಶಿಲಾಮುಖಿನು ಅವನನ್ನು ನೋಡಿ ಕೋಪದಿಂದ ಹೇಳಿದನು.

ಆ ಕೂಲಿಯವನು ಬೆರಗಾಗಿ, "ಮರುಮಾತಾಡಿದನು. ಮಾತಿಗೆ ಮಾತು ಏರುತ್ತ ಹೋಗಿ ಕೈ ಕೈ ಕಲೆಯುವವರೆಗೂ ಬಂತು. ಬೆಳಿಗ್ಗೆಯಿಂದ ಕಾಯಿಗಳನ್ನು ಕೊಯಿದು ಬಳಲಿ ಬೆವತುಹೋದ ಕೂಲಿಯವನು ಒಂದು ಹಣ್ಣು ತಿನ್ನಲು ಮಹಾ ಕೇಳಬೇಕೆ? ಪ್ರತ್ಯೇಕ ಹಣ ಕೊಡಬೇಕೆ? ಇದು ಆಳಿನ ವಾದ. ಕಡೆಗೆ ಕೂಲಿಯವನು ರೊಚ್ಚಿಗೆದ್ದು ಶಿಲಾಮುಖಿನ ದೇಹವನ್ನೆಲ್ಲಾ ಶುದ್ಧಿಮಾಡಿ ಹೊರಟು ಹೋಗಿಬಿಟ್ಟನು. ಉಳಿದ ಕೂಲಿಯವರೂ ಸಹ ಹೋಗಿಬಿಟ್ಟರು.

ಆ ಹಣ್ಣುಗಳನ್ನು ನೋಡುವವರಿಗೆ ಬಾಯಿಯಲ್ಲಿ ನೀರೂರುತ್ತಿದ್ದಿತು. ಅವುಗಳಿಂದ ಬರುವ ಹಣದ ರುಚಿಯನ್ನು ನೆನೆದು ಶಿಲಾಮುಖಿನಿಗೂ ಜೊಲ್ಲು ಒಸರುತ್ತಿದ್ದಿತು.

"ಒಂದು ಚಿಕ್ಕ ಹಣ್ಣಿನ ಬೆಲೆಯೇ ನಾಲ್ಕಾಣೆ ಇರುವಾಗ, ಅಷ್ಟು ದೊಡ್ಡ ಹಣ್ಣು ಒಬ್ಬ ಕೂಲಿಯವನು ತಿಂದುಬಿಡುವುದೆಂದರೇನು? ಅದರ ಮೇಲೆ ನನ್ನನ್ನೂ ಹೊಡೆದು ಬಿಟ್ಟನು. ಇಂತಹ ದುಷ್ಟರನ್ನು ಏನು ತಾನೇ ಮಾಡಲು ಸಾಧ್ಯ? ಏನೂ ತೋರದೆ ತನಗೆ ತಾನೇ ಕೈ ಕೈ ಹಿಸುಕಿಕೊಂಡನು ಶಿಲಾಮುಖಿ.

ಕಾಲ ಕಳೆಯುತ್ತಿದ್ದಂತೆ ಹಣ್ಣುಗಳೆಲ್ಲ ಹಾಳಾಗಿ ಹೋಗಲು ತೊಡಗಿದುವು. ಶಿಲಾಮುಖಿನು ಬಂದು ಬಂದು ಅವುಗಳನ್ನು ನೋಡುತ್ತಾ ಅಲ್ಲಿಯೇ ಸುತ್ತಿ ಸುತ್ತಿ ಅಲೆದಾಡುವನು. ಯಾರಾದರೂ ನೋಡಿ, "ಇದೇನ್ರೀ ಶಿಲಾಮುಖಿ ಸಾವುಕಾರ್ರೇ! ಕಾಯಿ ಹಣ್ಣುಗಳೆಲ್ಲಾ ಹಾಳಾಗಿ ಹೋಗುತ್ತಿವೆಯಲ್ಲಾ! ಸಂತೆಗೆ ಒಯ್ದು ಮಾರಬಾರದೇನ್ರೀ?" ಎಂದರೆ, "ಎಲ್ಲಾ ನನಗೆ ಗೊತ್ತಿದೆ ಹೋಗ್ರೀ? ಈ ಕೂಲೀ ಆಳುಗಳನ್ನು ನಂಬಲೇಬಾರದು. ಕಾಯಿ ಕೊಯಿದು ಕೊಡಿರಪ್ಪಾ ಅಂದರೆ, ಅವರ ಪಾಡಿಗೆ ತಿಂದು ಬಿಡೋದೇನಾ! ತಿಂದದ್ದಕ್ಕೆ ಹಣ ಕೇಳಿದರೆ ಮೈಮೇಲೆ ಏರಿ ಬರೋದುಂಟೇ? ಕಾಲ ಕೆಟ್ಟಿತು. ಯಾಕೆ ಬೇಕು ಈ ರಗಳೆ! ಮನುಷ್ಯರಿಗಿಂತ ಮಳೆಗಾಳಿ ಬಿಸಿಲುಗಳೇ ಎಷ್ಟೋ ವಾಸಿ. ಈಸಾರಿ ಬಿರುಗಾಳಿ ಬೀಸಿ ಎಲ್ಲಾ ಹೋಯಿತು ಅಂದುಕೊಳ್ಳುತ್ತೇನೆ!" ಎಂದು ಏನೇನೋ ಹೇಳುತ್ತಿದ್ದನು.

ಹೀಗೆ ಅವನು ಹಳಹಳಿಸಿಕೊಂಡಿರುವಾಗ ಮಾವಿನ ಮರದ ಕೊಂಬೆಯ ಮೇಲೆ ಕುಳಿತು ಸುಶ್ರಾವ್ಯವಾಗಿ ಹಾಡುವ ಒಂದು ಚಿಕ್ಕ ಸುಂದರವಾದ ಪಕ್ಷಿ ಅವನ ಕಣ್ಣಿಗೆ ಬಿತ್ತು. ಹಾಡುತ್ತಾ ಅದು ತೀರ ಕೆಳಗಿನ ಕೈಗೆಟಕುವ ಕೊಂಬೆಗೇ ಬಂದಿತು.

ಅದು ಒಂದು ಗುಬ್ಬಚ್ಚಿಯಷ್ಟೇ ಇದ್ದಿತು. ಅದರ ಬಾಲದಲ್ಲಿ ಇಂದ್ರಧನುಸ್ಸಿನ ಎಲ್ಲಾ ಬಣ್ಣಗಳೂ ಇದ್ದುವು. ಆ ಪುಟ್ಟ ಮುದ್ದು ಪಕ್ಷಿ ಏರಿಳಿತವಾದ

ರಾಗದಲ್ಲಿ ಸುಮಧುರವಾಗಿ ಗಾನಮಾಡುತ್ತಿರುವಾಗವೊಂದು ಮರವೂ ಚೇತರಿಸಿ ಚಿಗುರಬೇಕು!

ಆ ಮಧುರ ಗಾನದಿಂದ ಶಿಲಾಮುಖನಿಗೆ ಏನೋ ಒಂದು ಆನಂದ ಉಂಟಾಯಿತು. ಮೆಲ್ಲನೆ ಹೋಗಿ ಆ ಪುಟ್ಟ ಪಕ್ಷಿಯನ್ನು ಗಬಕ್ಕನೆ ಮುಷ್ಟಿಯಲ್ಲಿ ಸಿಕ್ಕಿಸಿಕೊಂಡನು. ಆಗ ಅದು ಹೆದರಿ ಗಾಬರಿಯಾಗಿ ಒದರಾಡಲೂ ಇಲ್ಲ; ಆರ್ತನಾದವೆಬ್ಬಿಸಲೂ ಇಲ್ಲ. ಹಾಡುವುದನ್ನು ನಿಲ್ಲಿಸಿ ಸುಮ್ಮನಾಯಿತು, ಅಷ್ಟೇ!




"ಏ ಪಕ್ಷೀ! ನಿನಗೆ ನನ್ನ ಮಾತು ಅರ್ಥವಾಗುತ್ತೋ ಇಲ್ಲವೋ? ನಾನು ಏಕೆ ನಿನ್ನನ್ನು ಹಿಡಿದೆನು ಗೊತ್ತೊ? ಒಳ್ಳೆಯ ರಾಗದಿಂದ ಹಾಡುವ ನೀನು, ನನಗೆ ಈ ಹಣ್ಣುಗಳಿಂದ ಒಳ್ಳೆಯ ಲಾಭವಾಗುವ ಯುಕ್ತಿಯನ್ನು ತಿಳಿಸಬಲ್ಲೆಯಾ ಅಂತ? ಜನರು ಇದನ್ನೆಲ್ಲಾ ಇಲ್ಲಿಗೇ ಬಂದು ಕೊಂಡುಕೊಳ್ಳಬೇಕು. ಹೇಗೆ?" ಎಂದನು.

"ಶಿಲಾಮುಖಾ! ನನ್ನನ್ನು ಬಿಟ್ಟುಬಿಟ್ಟರೆ ನಿನಗೆ ಲಾಭವಾಗುವ ಮೂರು ಮಾತು ಹೇಳುತ್ತೇನೆ" ಎಂದಿತು ಪಕ್ಷಿ.

ಪಕ್ಷಿ ಮಾನವ ಭಾಷೆಯಲ್ಲಿ ಮಾತಾಡಿದುದನ್ನು ಕೇಳಿ ಶಿಲಾಮುಖನು ಬೆರಗಾದನು. ಅವನು ಸುಮ್ಮನೆ ಅದನ್ನು ಹಿಡಿದು ಏನೋ ಕೇಳಿದರೆ, ಅದು ನಿಜಕ್ಕೂ ಉತ್ತರ ಕೊಡುತ್ತಿದೆ.

"ನಿಜಕ್ಕೂ ಹೇಳುವಿಯಾ?" ಎಂದು ಅವನು ಕೇಳಲು "ಹೌದು ಹೌದು" ಎಂದಿತು ಪಕ್ಷಿ.

ಮತ್ತೇನೂ ಹೇಳದೆ ಶಿಲಾಮುಖನು ಪಕ್ಷಿಯನ್ನು ಮುಷ್ಟಿಯೊಳಗಿನಿಂದ ಬಿಟ್ಟನು.

ಅದು ಭರ್ರನೆ ಹಾರುತ್ತಿರಲು, ಲಾಭದ ಮಾತು ಯಾವಾಗ ಕಿವಿಗೆ ಬೀಳುವುದೋ ಎಂದು ಕಿವಿಯನ್ನು ತೀಡಿಕೊಂಡನು ಶಿಲಾಮುಖ.

"ಇಕೋ, ನಾನು ಹೇಳುವೆನೆಂದ ಮೂರು ಮಾತುಗಳಲ್ಲಿ ಮೊದಲನೆಯದು ಏನೆಂದರೆ, ತನ್ನಲ್ಲಿ ಇಲ್ಲದೇ ಹೋದ ವಸ್ತುಗಳಿಗಾಗಿ ಎಂದಿಗೂ ಚಿಂತಿಸಬಾರದು!" ಎಂದು ಹೇಳಿತು ಆ ಪುಟ್ಟ ಪಕ್ಷಿ.

"ಇದೆಂಥ ಹೊಸ ಮಾತು! ನನಗೆ ಗೊತ್ತಿದ್ದದ್ದೇ. ಚಿಕ್ಕಂದಿನಲ್ಲಿ ಉಪಾಧ್ಯಾಯರು ಹೇಳಿಕೊಟ್ಟದ್ದೇ. ಇದನ್ನು ಈಗ ಕೇಳಬೇಕಾದಂಥ ಮೂರ್ಖನು ನಾನಲ್ಲ!" ಎಂದನು ಶಿಲಾಮುಖ.

"ಶಿಲಾಮುಖಾ! ನೀನು ನಿಜಕ್ಕೂ ಮೂರ್ಖನೇ. ಇಲ್ಲದಿದ್ದರೆ ನಾನು ನಿನ್ನ ಮುಷ್ಟಿಯೊಳಗಿರುವಾಗ, ನನ್ನ ಶರೀರದಲ್ಲಿ ಮಣ ಭಾರದಷ್ಟು ಬಂಗಾರದ ವಸ್ತುವಿರುವುದನ್ನು ನೀನು ತಿಳಿದುಕೊಳ್ಳುತ್ತಿದ್ದಿ!" ಎಂದಿತು ಪಕ್ಷಿ.

"ಅಯ್ಯಯ್ಯೋ! ಅಷ್ಟಿದ್ದಿತೇ? ನಿನ್ನನ್ನು ಬಿಟ್ಟು ಎಂಥಾ ತಪ್ಪು ಮಾಡಿದೆ!" ಎಂದು ಶಿಲಾಮುಖ ಹಣೆಬಡೆದುಕೊಂಡನು.

ಅದನ್ನು ನೋಡಿ ಪಕ್ಷಿ ಕಿಲಕಿಲನೆ ನಕ್ಕು, ರೆಕ್ಕೆಗಳನ್ನು ಪಟಪಟಿಸಿ, "ಶಿಲಾಮುಖಾ! ನೀನು

ಮೂರ್ಖನೇ ನಿಜ, ಇಷ್ಟು ಸಣ್ಣ ನನ್ನ ಶರೀರದಲ್ಲಿ ಮಣದ ಭಾರವಿದೆಯೆಂದರೆ, ಆ ಮಣದ ಭಾರವೂ ನಿನಗೆ ಗೊತ್ತಿಲ್ಲ. ಹುಚ್ಚ!" ಎಂದಿತು.

ಶಿಲಾಮುಖನು ಕೆಟ್ಟ ಕೋಪದಿಂದ, "ಓಹೋ! ಸುಳ್ಳಿನ ಮುದ್ದೆಯೇ ನೀನೋ!" ಎಂದು ಕಿರಿಚಿ ಹಲ್ಲು ಕಡಿದನು.

"ಸುಳ್ಳಲ್ಲವೆಂಬುದನ್ನು ಮತ್ತೆ ತೋರಿಸುತ್ತೇನೆ. ಈಗ ಲಕ್ಷ್ಯಕೊಟ್ಟು ನನ್ನ ಎರಡನೇ ಮಾತು ಕೇಳು. ಇನ್ನೊಬ್ಬರು ಹೇಳಿದ್ದನ್ನೆಲ್ಲಾ ನಿಜವೆಂದು ತಿಳಿಯ ಬೇಡ." ಎಂದಿತು ಹಕ್ಕಿ.

"ಅದನ್ನು ಬೇರೆ ಹೇಳಬೇಕೇ? ನಿನ್ನಿಂದಲೇ ಗೊತ್ತಾಯಿತಲ್ಲಾ!" ಎಂದನು ಶಿಲಾಮುಖ.

"ಎಲ್ಲಾ ಗೊತ್ತಿದ್ದೂ ಗೊತ್ತಿಲ್ಲದವನಂತೆ ಪ್ರವರ್ತಿಸುವ ಮೂರ್ಖನು ನೀನು. ಇನ್ನು ಮೂರನೇ ಮಾತು ಕೇಳು. ಇದು ನನ್ನಲ್ಲಿರುವ ಮಣ ಗಟ್ಲೇ ಬಂಗಾರದ ಮಾತು. ಆ ಗುಟ್ಟು ನಿನಗೆ ಗೊತ್ತಿದ್ದೂ ಗೊತ್ತಿಲ್ಲದಂತಿದ್ದೀಯೇ. ಒಂದು ಹಣ್ಣು ತಿಂದದ್ದಕ್ಕೆ ನಷ್ಟವನ್ನೇ ಮೈಮೇಲೆ ಸುರಿದುಕೊಂಡ ಶತ ಮೂರ್ಖ! ತೋಟದ ಮೂಲೆಯಲ್ಲಿ ಮಣಗಟ್ಲೆ ಬಂಗಾರವಾಗುವಷ್ಟು ನಿನ್ನದೇ ಹಣವಿದೆ! ನಾನೇನೂ ಸುಳ್ಳಿನ ಮುದ್ದೆಯಲ್ಲ. ಈಗಾದರೂ ಒಪ್ಪಿಕೊಳ್ಳುವೆಯಷ್ಟೆ?" ಎಂದಿತು ಆ ಗಡುಸು ಪಕ್ಷಿ.

ಈಸಾರಿ ಶಿಲಾಮುಖನು ದೊಡ್ಡ ಬೆಪ್ಪು ಬಡೆದುಕೊಂಡವನಂತೆ, "ಹೌದು, ನಾನು ಮೂರ್ಖನೇ!" ಎಂದು ಹಣೆ ಚಚ್ಚಿಕೊಂಡನು.

ಆ ಸಮಯದಲ್ಲಿ ತೋಟದ ಮಧ್ಯದಲ್ಲಿ ದೊಡ್ಡದೊಂದು ಸುಳಿಗಾಳಿ ಅಕಸ್ಮಾತ್ತಾಗಿ ಎದ್ದಿತು. ಒಮ್ಮೆಗೇ ಮರದ ಎಲೆಗಳೆಲ್ಲ ಬರಬರನೆ ಉದುರಿದುವು. ಮರಗಳೆಲ್ಲ ಗಿರಿಗಿರಿ ತಿರುಗಿದುವು. ತಾಯಿ ಬೇರಿನೊಂದಿಗೆ ಬೀಳ ತೊಡಗಿದುವು ಮರಗಳು.

ಭಯದಿಂದ ಶಿಲಾಮುಖನು ಕಣ್ಣುಗಳನ್ನು ಮುಚ್ಚಿ ಕುಸಿದು ಕುಳಿತನು. ಮತ್ತೆ ಅವನು ಕಣ್ಣು ಬಿಡಿಸಿ ನೋಡಿದ್ದು ಗಾಳಿಯ ರಭಸ ತಗ್ಗಿದ ಮೇಲೆಯೇ. ಆಗ ಏನಿದೆ! ಚಿಕ್ಕ ಪಕ್ಷಿ ಎಲ್ಲಿ ಹೋಯಿತೋ ಏನೋ! ಅವನು ವಾಸಮಾಡುವ ಗುಡಿಸಲು ಪೂರ್ತಿ ಹಾರಿ ಹೋಗಿತ್ತು. ಗೋಡೆಗಳು ಮಾತ್ರ ಗುರುತಾಗಿ ನಿಂತಿದ್ದುವು.

"ಲಕ್ಷ್ಮೀದೇವಿ ಐಶ್ವರ್ಯವನ್ನು ಕೊಟ್ಟರೂ ನಾನು ಅನುಭವಿಸಲಿಲ್ಲ. ಬೇರೆಯವರಿಗೂ ಅನುಭವಿಸಲು ಬಿಡಲಿಲ್ಲ. ಹೆಂಡತಿ ಮಕ್ಕಳು ಆಶೆಪಟ್ಟುದನ್ನೂ ಕೊಡಲಿಲ್ಲ. ನಿಜಕ್ಕೂ ನಾನು ಮೂರ್ಖನೇ!" ಅಂದುಕೊಂಡು ಶಿಲಾಮುಖನು ಹುಗಿದಿಟ್ಟ ತನ್ನ ಹಣದಿಂದ, ಒಳ್ಳೆಯ ರೀತಿಯಲ್ಲಿ ಹೊಸ ಬಾಳುವೆಗೆ ಪ್ರಾರಂಭಮಾಡಿದನು.





# ಅಪೋಹದ ಅಂತ್ಯ

**ಪು**ಂಗನಪುರವೆಂಬ ಊರಿನಲ್ಲಿರುವ ದೊಡ್ಡ ಆಸ್ತಿವಂತರೊಳಗೆ ಚೈತನ್ಯನೂ ಒಬ್ಬನು. ಯುವಕನಾದ ಚೈತನ್ಯನಿಗೆ ಹೊಸತಾಗಿ ವಿವಾಹವಾಗಿತ್ತು. ಮನೆ ತುಂಬಿದ ಹೆಂಡತಿ ಭಾನುಮತಿ ಸಂಪನ್ನರ ಮನೆಯ ಹುಡುಗಿ. ಅವಳ ಜನ್ಮದಿನದ ಹಬ್ಬದ ಮುಂಚಿನ ದಿನ ಚೈತನ್ಯನು ಹೆಂಡತಿಗೆ ಬಹುಮಾನ ಕೊಡಲು, ಪಟ್ಟಣದಿಂದ ಹತ್ತು ಸಾವಿರ ರೂಪಾಯಿ ಕೊಟ್ಟು ಒಂದು ಒಳ್ಳೆಯ ಮುತ್ತಿನ ಹಾರವನ್ನು ಕೊಂಡು ಕೊಂಡನು.

ಅವನು ತನ್ನ ಕುದುರೆಯ ಗಾಡಿಯಲ್ಲಿ ಊರಿಗೆ ಹಿಂದಿರುಗುತ್ತಿದ್ದಾಗ ಬೇಗದಲ್ಲೇ ಸಾಯಂಕಾಲವಾಯಿತು. ಕತ್ತಲೆ ಬರುವುದರೊಳಗೇ ಊರಿಗೆ ತಲಪಬೇಕೆಂದುಕೊಂಡು ಚೈತನ್ಯನು ಬಂಡಿಗಾರ ಹಾಲಪ್ಪನಿಗೆ "ಸ್ವಲ್ಪ ಬೇಗನೆ ಓಡಿಸಪ್ಪ" ಎಂದನು.

"ಹಾಗೆಯೇ ಆಗಲಿ ಒಡೆಯರೇ!" ಎನ್ನುತ್ತ ಹಾಲಪ್ಪನು ಕುದುರೆಯ ಕಿವಿಯ ಹತ್ತಿರ ಚಾಟಿಯ ಧ್ವನಿ ಹಾರಿಸಿ, "ಹೈಹೈ" ಎಂದನು. ಕುದುರೆ ಉತ್ಸಾಹದಿಂದ ಓಡತೊಡಗಿತು. ಚೈತನ್ಯನಿಗೆ ಸಣ್ಣಗೆ ತೂಕಡಿಕೆ ಬಂದಿತು.

ಸ್ವಲ್ಪ ಹೊತ್ತಿಗೆ ಗಾಡಿ ನಿಂತುಬಿಡಲು ಚೈತನ್ಯನು ಕಣ್ಣು ತೆರೆದು "ನಿಲ್ಲಿಸಿದೆ ಏಕೆ?" ಎಂದು ಕೇಳಿದನು.

ಹಾಲಪ್ಪನು ದಾರಿಯ ಬದಿಯಲ್ಲಿ ನಿಂತಿದ್ದ ಒಬ್ಬನನ್ನು ಚೈತನ್ಯನಿಗೆ ತೋರಿಸುತ್ತ, "ಅಯ್ಯಾ, ಇವನು ನನ್ನ ಹೆಂಡ್ತೀಯ ಚಿಕ್ಕಪ್ಪನ ಮಗ ಕಾಳಪ್ಪ. ಇವನ ತಾತ ಸಾವು ಬದುಕಿನ ಅಂಚಿನಲ್ಲಿ ಇದ್ದಾರಂತೆ. ಅದು ನಮ್ಮೂರಿನ ಪಕ್ಕದಲ್ಲೇ ಇದೆ. ಬೇಗ ಹೋದರೆ ಕಡೆಗಾಲದಲ್ಲಾದರೂ ಅವರನ್ನು ನೋಡಬಹುದು ಎನ್ನುತ್ತಾನೆ" ಎಂದನು.

"ಎಂದರೆ ಈ ಗಾಡಿಯಲ್ಲಿ ಹತ್ತಲು ಕೇಳುತ್ತಾನೆ. ಸರಿ, ಹತ್ತಿ ಕುಳಿತುಕೊಳ್ಳಲಿ" ಎಂದನು ಚೈತನ್ಯ ನಿರಾಸಕ್ತಿಯಿಂದ.

ಸಾಧಾರಣವಾಗಿ ಚೈತನ್ಯನಿಗೆ ತನ್ನ ಗಾಡಿಯಲ್ಲಿ ಬೇರೆಯವರು ಹತ್ತುವುದು ಇಷ್ಟವಾಗದು. ಹಾಲಪ್ಪನ ಬಂಧು ಕಾಳಪ್ಪ ಚೈತನ್ಯನಿಗೆ ವಂದಿಸಿ, ಗಾಡಿಯ ಬದಿಯಲ್ಲಿ ಮುದುಡಿ ಕುಳಿತನು.

ಗಾಡಿ ಮತ್ತೆ ಹೊರಟಿತು. ಹಾಲಪ್ಪನು ಆಗಾಗ ಚಾಟಿಯ ಧ್ವನಿ ಹಾರಿಸಿಕೊಂಡಿದ್ದನು. ಮೊದಲೇ ಅದು ಏರುತಗ್ಗಾದ ಬೀದಿ, ಒಂದು ಕಡೆಯಲ್ಲಿ

ಎಂ. ಕೆ. ಈಶ್ವರರಾವ್



ಬಾವಿ ತಿರುಗುವ ಸಮಯದಲ್ಲಿ ಗಾಡಿಯ ಚಕ್ರವೊಂದು ಹೊಂಡಕ್ಕೆ ಥಕ್ಕನೆ ಜಾರಿತು. ಕಣ್ಣುಮುಚ್ಚಿ ಬಿಡಿಸುವುದರೊಳಗೆ ಗಾಡಿ ಒಂದು ಕಡೆಗೆ ವಾಲಿತು. ಹಾಲಪ್ಪನು ತಟಕ್ಕನೆ ಕೆಳಗೆ ಹಾರಿದನು. ಚೈತನ್ಯನೂ ಕಾಳಪ್ಪನೂ ಕೆಳಗೆ ಬಿದ್ದರು. ಅವರ ಮೇಲೆ ಚೈತನ್ಯನು ಕೊಂಡುಕೊಂಡ ಹಣ್ಣಿನ ಬುಟ್ಟಿಗಳೂ, ಇತರ ಸಾಮಾನುಗಳೂ ಬಿದ್ದುವು.

ಕಾಳಪ್ಪನು ಮೊದಲು ಎದ್ದುಬಿಟ್ಟನು. ಹಾಲಪ್ಪ ಕಾಳಪ್ಪರು ಸೇರಿ ಚೈತನ್ಯನನ್ನು ಎಬ್ಬಿಸಿದರು. ಚೈತನ್ಯನಿಗೆ ಬಲಗಾಲಿನ ಗಂಟು ಸ್ವಲ್ಪ ಉಳುಕಿಕೊಂಡಿತು. ಆಮೇಲೆ ಕಾಳಪ್ಪನೂ ಹಾಲಪ್ಪನೂ ಕೂಡಿ, ಚಕ್ರವನ್ನು ಹೊಂಡದಿಂದ ಎತ್ತಿ ಗಾಡಿಯನ್ನು ಸರಿಯಾಗಿ ನಿಲ್ಲಿಸಿದರು. ಇಬ್ಬರೂ ಕೂಡಿ ಸಾಮಾನುಗಳನ್ನೆಲ್ಲಾ ಸರಿಮಾಡಿ ಗಾಡಿಯಲ್ಲಿಟ್ಟರು. ಮತ್ತೆ ಹೊರಟಿತು ಅವರ ಗಾಡಿ. ಊರನ್ನು ಸೇರಿದ ಕೂಡಲೇ ಕಾಳಪ್ಪನು ಹೊರಟು ಹೋದನು.

ಚೈತನ್ಯನು ತನ್ನ ಮನೆಯ ಮುಂದೆ ಗಾಡಿಯಿಂದಿಳಿದು ಉಳುಕಿದ ಕಾಲಗಂಟನ್ನು ತಿಕ್ಕಿಕೊಂಡು ತುಸು ಕುಂಟುತ್ತ ಮನೆಯ ಚಾವಡಿಯೊಳಗೆ ಹೋದನು. ಅವನ ಹೆಂಡತಿ ಬಂದು, "ನನ್ನ ಜನ್ಮದಿನ ಹಬ್ಬದ ಬಹುಮಾನ ಕುಂಟುವಷ್ಟು ದೊಡ್ಡ ಹೊರೆಯೇ ?" ಎಂದು ಕೇಳಿದಳು.

ಆ ಪ್ರಶ್ನೆ ಕೇಳಿ ಚೈತನ್ಯನಿಗೆ ಚಿವುಕ್ಕೆಂದ ಹಾಗಾಯಿತು. ಅವಳು ತನ್ನ ಕಾಲು ನೋವನ್ನು ಗಮನಿಸಿದಂತಿಲ್ಲ.

"ಅಬ್ಬಬ್ಬ ! ದಾರಿಯಲ್ಲಿ ಗಾಡಿ ಮಗುಚಿಬಿದ್ದು, ನಾನು ಹೀಗೆ ಬಂದದ್ದೇ ದೊಡ್ಡದು ! ದೊಡ್ಡ ಗಂಡಾಂತರ ತಪ್ಪಿತು" ಎಂದನು ಚೈತನ್ಯ.

"ಅಯ್ಯಯ್ಯೋ ! ಮೊದಲು ಅಮೃತಾಂಜನ ತಿಕ್ಕುತ್ತೇನೆ" ಎಂದು ಭಾನುಮತಿ ಅವನ ಕೈಹಿಡಿದಳು.

"ಅದೆಲ್ಲಾ ಮತ್ತೆ ತಿಕ್ಕುವಿಯಂತೆ. ಮೊದಲು ನಾನು ತಂದ ಬಹುಮಾನ ನೋಡಿಬಿಡು !" ಎಂದು ಚೀಲವನ್ನು ಅವಳ ಕೈಗೆ ಕೊಟ್ಟನು ಚೈತನ್ಯ.

ಭಾನುಮತಿ ಗಂಡನು ಕೊಟ್ಟ ಚೀಲವನ್ನು ಆತುರದಿಂದ ತೆಗೆದುಕೊಂಡು, ಅದರೊಳಗಿದ್ದ ಸುಂದರವಾದ ಚಿಕ್ಕ ಪೆಟ್ಟಿಗೆಯನ್ನು ತೆರೆದು ನೋಡಿದಳು.

"ಇವತ್ತು ನನ್ನ ಸ್ನೇಹಿತೆಯೊಬ್ಬಳು ಬಂದಿದ್ದಳು. ಅವಳೂ ನನಗೊಂದು ಬಹುಮಾನ ತೆಗೆದಿಟ್ಟಿದ್ದಾಳಂತೆ. ನೀವು ಏನು ತಂದರೆಂದು ನೋಡಿದ ಮೇಲೆ ಅದನ್ನು ತೋರಿಸುತ್ತಾಳಂತೆ. ಇದನ್ನು ಅವಳಿಗೆ ತೋರಿಸುತ್ತೇನೆ" ಎಂದು ಥಕ್ಕನೆ ಗಾಬರಿಯಾಗಿ, "ಏನ್ರೀ ಇದು ನೀವು ತಂದದ್ದು ?" ಎಂದಳು.

ಚೈತನ್ಯನೂ ನೋಡಿದನು. ತೆರೆದ ಆ ಪೆಟ್ಟಿಗೆ ಖಾಲಿಯಾಗಿತ್ತು!

ಭಾನುಮತಿ ಚೈತನ್ಯನನ್ನು ದುರುಗುಟ್ಟಿ ನೋಡುತ್ತ "ಚಿನ್ನಾಗಿದೆ ನೀವು ತಂದ ಬಹುಮಾನ !" ಎಂದಳು.



ಚೈತನ್ಯನಿಗೆ ಆಶ್ಚರ್ಯವೂ ಕೋಪವೂ ಗಾಬರಿಯೂ ಒಟ್ಟೊಟ್ಟಿಗೇ ಉಕ್ಕಿಕೊಂಡು ಬಂತು.

"ಸರಿ ಸರಿ, ನೀವು ತಂದ ಬಹುಮಾನ ನಾಳೆಯೇ ಎಲ್ಲರ ಇದಿರಿನಲ್ಲಿ ಕೊಡುತ್ತಾರಂತೆ ಎಂದು ಸ್ನೇಹಿತೆಗೆ ಹೇಳಿಬಿಡುತ್ತೇನೆ" ಎಂದು ಖಾಲೀ ಪೆಟ್ಟಿಗೆಯನ್ನು ಅಲ್ಲೇ ಇಟ್ಟು ಬೇಗಬೇಗನೇ ಒಳಗೆ ಹೋದಳು ಭಾನುಮತಿ.

ಚೈತನ್ಯನು ಕೋಪದಿಂದ ಹಲ್ಲು ಕಚ್ಚುತ್ತ, ಕರ್ಕಶ ಸ್ವರದಿಂದ ಹಾಲಪ್ಪನನ್ನು ಕರೆಯುತ್ತ ಕುಂಟಿಕೊಂಡು ಹೊರಗೆ ಹೋದನು. ದಾರಿಯಲ್ಲಿ ಗಾಡಿಯನ್ನು ಏರಿಕೊಂಡವನ ಕಳ್ಳತನದ ಕೆಲಸವೇ ಇದು ಎಂದು ಕೊಂಡನು ಚೈತನ್ಯ.

ಆಗ ಹಾಲಪ್ಪನು ಹಟ್ಟಿಯ ಹಿಂದೆ ಕುದುರೆಯನ್ನು ಕಟ್ಟಿ, ಮಾಲೀಸು ಮಾಡುತ್ತ ಅದಕ್ಕೆ ದಾಣಾ ತಿನ್ನಿಸುವ ಕೆಲಸದಲ್ಲಿ ಮಗ್ನನಾಗಿದ್ದನು.

ಚೈತನ್ಯನು ಅಲ್ಲಿಗೇ ಬಂದು, "ನಿನ್ನ ಹೆಂಡತಿಯ ಚಿಕ್ಕಪ್ಪನ ಮಗಾ ಅಂತ ಹೇಳಿ ಕಳ್ಳಕೊರಮನನ್ನು ಗಾಡಿಗೆ ಹತ್ತಿಸಿದಿ. ಗಾಡಿಯಲ್ಲಿದ್ದ ಸಾಮಾನೆಲ್ಲಾ ಮಗುಚಿಕೊಂಡಾಗ ಹತ್ತು ಸಾವಿರ ಬೆಲೆಯ ಮುತ್ತಿನ ಹಾರವನ್ನು ಲಪಟಾಯಿಸಿ, ಖಾಲೀ ಪೆಟ್ಟಿಗೆಯನ್ನು ನನ್ನ ಚೀಲದೊಳಗೆ ತುರುಕಿದ್ದಾನೆ. ಕೂಡಲೇ ಹೋಗಿ ಅವನ ಕೈಯಿಂದ ಮುತ್ತಿನ ಹಾರ ಎಳೆದು ಕೊಂಡು ಬಾ. ಬರಿಗೈಯಿಂದ ಕೆಲಸಕ್ಕೆ ಬರಲೇಬೇಡ" ಎಂದು ಕೋಪದಿಂದ ಗುಡುಗಿದನು.

ಯಜಮಾನರ ಹತ್ತು ಸಾವಿರ ಬೆಲೆಯ ವಸ್ತು ಕಳವಾಯಿತೆಂದುದನ್ನು ಕೇಳಿ, ಹಾಲಪ್ಪನ ತಲೆಗೆ ಸಿಡಿಲು ಬಡೆದ ಹಾಗಾಯಿತು. ಅವನು ಯಜಮಾನರಿಗೆ ಏನು ಉತ್ತರ ಕೊಡಬೇಕೆಂದು ತಿಳಿಯದೆ ತಲೆ ಬಾಗಿಸಿಕೊಂಡನು. ಚೈತನ್ಯನು ಸ್ವಲ್ಪ ಹೊತ್ತು ಜರೆದು "ನಡೀ ನನ್ನ ಕಣ್ಣೆದಿರಿನಿಂದ!" ಎಂದು ಛೀತ್ಕರಿಸಿ ಹೊರಟುಹೋದ ಕೂಡಲೇ ಹಾಲಪ್ಪನು ಓಡುತ್ತಾ ತನ್ನ ಮನೆಗೆ ಹೋದನು. ಗುಡಿಸಲಿನ ಮುಂದೆ ಹಾಲಪ್ಪನ ಹೆಂಡತಿ ಗಂಡನನ್ನು ಇದಿರು ನೋಡುತ್ತಾ ಇದ್ದಳು. ಹಾಲಪ್ಪನು ಅವಳ ಹತ್ತಿರ ಧುತ್ತೆಂದು ಹಾರಿ, "ನಿನ್ನ ತೌರು ಮನೆಯ ಬಂಧುಗಳೆಲ್ಲ ದೊಡ್ಡ ದೊಡ್ಡ ಕಳ್ಳರೆಂದಾಯಿತು. ಆ ಕಾಳಪ್ಪನನ್ನು ಹೋಗಲೀ ಅಂತ ಗಾಡೀಲಿ ಕೂರಿಸಿದರೆ, ನಮ್ಮ ಅಯ್ಯಾ ಅವರ ಚೀಲದೊಳಗಿನಿಂದ ಸಾವಿರಾರು ರೂಪಾಯಿಯ ಹಾರವನ್ನು ಲಪಟಾಯಿಸಿ ಬಿಟ್ಟ. ಆ ತಾತನಿಗೆ ಕಸ್ತೂ ಅಂತ ಗೋಳಾಡಿದ್ದಕ್ಕೆ ಮನಸ್ಸು ಕರಗಿದ್ದೇ ತಪ್ಪಾಯಿತು. ಬೇಗ ಹೋಗಿ ಆ ನಗವನ್ನು ತೆಗೆದು ಕೊಂಡು ಬಾ. ಇಲ್ಲದಿದ್ದರೆ ನನಗೆ ಕೆಲಸವೇ ಇಲ್ಲ. ಹೆಸರೂ ಹಾಳು" ಎಂದನು.

ತನ್ನ ತಾತ ಅಂತಿಮ ಸ್ಥಿತಿಯಲ್ಲಿರುವನೆಂದು ತಿಳಿದು ಹಾಲಪ್ಪನ ಹೆಂಡತಿ, ಹಾರದ ಕಳವಿನ ವಿಷಯವನ್ನು ಮರೆತವಳಾಗಿ, "ಅಯ್ಯಯ್ಯೋ!



ತಾತನಿಗೆ ಅಷ್ಟು ಜೋರಾಗಿದೆಯೇ! ಯಾರೂ ನನಗೆ ಸುದ್ದಿ ತಿಳಿಸಲಿಲ್ಲ" ಎನ್ನುತ್ತ ತಾತನ ಮನೆಗೆ ಓಡುತ್ತಾ ಹೋದಳು.

ಚೈತನ್ಯನು ಕಾಲು ಉಳುಕಿನಿಂದ ಕುಂಟುತ್ತ, ಮನೆಯ ಮುಂಬಾಗಿಲ ಹತ್ತಿರ ಬರುವಾಗ, ಮನೆಯೊಳಗಿನಿಂದ ತನ್ನ ಹೆಂಡತಿಯ ಈಡಿನವಳೊಬ್ಬಳು ಸುಂದರವಾದೊಂದು ಕರಡಿಗೆ ಹಿಡಿದುಕೊಂಡು ಮನೆಯೊಳಗಿನಿಂದ ಹೊರಗೆ ಬಂದು ಹೋಗ ತೊಡಗಿದಳು,

ಅವಳ ಹಿಂದೆಯೇ ಬಂದ ಭಾನುಮತಿ, ಚೈತನ್ಯನ ಪಕ್ಕದಲ್ಲಿ ನಿಂತು, ಅವನ ಕೈ ಹಿಡಿದು, "ಇವಳೇ ಆ ಸ್ನೇಹಿತೆ. ಅವಳೂ ತಾನು ತಂದುದನ್ನು ನಾಳೆಯೇ ತೋರಿಸುತ್ತಾಳಂತೆ. ನೀವು ಖಾಲೀ ಪೆಟ್ಟಿಗೆ ತಂದಿರೆಂದು ಅವಳ ಹತ್ತಿರ ಹೇಳಲಿಕ್ಕೆ ಆಗುತ್ತೆಯೆ? ಅದೆಲ್ಲಾ ಮತ್ತೆ ಹೇಳುವಿರಂತೆ. ನಿಮ್ಮ ಕಾಲಿಗೆ ತೈಲ ಹಚ್ಚಿ ಕಾವು ಕೊಡುತ್ತೇನೆ. ಯಾರಿಗೋ ಕೋಪದಲ್ಲಿ ಬೈದಾಡಿ ಬಂದಿರಲ್ಲಾ!" ಎಂದಳು.

ಹೆಂಡತಿಯ ಪ್ರೀತಿಯ ಮಾತಿನಿಂದ ಚೈತನ್ಯನ ನೋವೂ, ಚಿಂತೆಯೂ ಕೋಪವೂ ಬಹಳ ಮಟ್ಟಿಗೆ ಶಾಂತವಾಯಿತು. ಅವಳ ಜತೆಯಲ್ಲೇ ಒಳಗೆ ಹೋದನು. ದಾರಿಯಲ್ಲಿ ನಡೆದುದನ್ನೆಲ್ಲಾ ಹೆಂಡತಿಯೊಡನೆ ಹೇಳಿದನು.

ಮರುದಿನ ಬೆಳಿಗ್ಗೆ ಕಾಳಪ್ಪನಿಂದ ಹಾಲಪ್ಪನು ಮುತ್ತಿನ ಹಾರವನ್ನು ತರುವನೆಂದು ಚೈತನ್ಯನು ದಾರೀ ನೋಡುತ್ತ, ಜಗಲಿಗೂ ಚಾವಡಿಗೂ ಅಂಗಳಕ್ಕೂ ಎಡತಾಕಿಕೊಂಡಿದ್ದನು. ಆಗ ಪಟ್ಟಣದಲ್ಲಿ ಅವನು ಮುತ್ತಿನ ಹಾರವನ್ನು ಕೊಂಡುಕೊಂಡ ನಗಗಳ ಅಂಗಡಿಯ ಯಜಮಾನನು ಅಲ್ಲಿಗೆ ಬಂದು, "ಕ್ಷಮಿಸಿರಿ ಚೈತನ್ಯರೇ. ನಿನ್ನೆ ನಮ್ಮ ಅಂಗಡಿಯ ಕೆಲಸದ ಆಳು ಮುತ್ತಿನ ಹಾರದ ಪೆಟ್ಟಿಗೆಗೆ ಬದಲು ಅಂಥಾದ್ದೇ ಖಾಲೀ ಪೆಟ್ಟಿಗೆಯನ್ನು ನಿಮ್ಮ ಚೀಲದೊಳಗೆ ಇಟ್ಟು ಬಿಟ್ಟನು. ರಾತ್ರಿ ಅಂಗಡಿ ಮುಚ್ಚುವಾಗ ನಡೆದ ಈ ತಪ್ಪು ಗೊತ್ತಾಯಿತು" ಎಂದು ಹೇಳಿ ಮುತ್ತಿನ ಹಾರದ ಪೆಟ್ಟಿಗೆಯನ್ನು ಅವನ ಕೈಗೆ ಕೊಟ್ಟನು.

ಚೈತನ್ಯನು ಅವನ ಪ್ರಾಮಾಣಿಕತೆಯನ್ನು ಮೆಚ್ಚಿ ಊಟ ಮಾಡಿಕೊಂಡು ಹೋಗಬೇಕೆಂದು ಕೇಳಿಕೊಂಡನು. ಆದರೆ ಅಂಗಡಿ ಒಡೆಯನು ತನಗೆ ಅವಸರವಾಗಿ ಹೋಗಬೇಕೆಂದು ಹೇಳಿ ಹೊರಟು ಹೋದನು.

ಚೈತನ್ಯನು ಹಾಲಪ್ಪನನ್ನು ಇನ್ನಿಷ್ಟು ತೀವ್ರವಾಗಿ ನೆನೆಯುತ್ತ ಸಂತೋಷದಿಂದ ಹೆಂಡತಿಯನ್ನು ಕರೆಯಬೇಕೆನ್ನುವಷ್ಟರಲ್ಲಿ, ಹಾಲಪ್ಪನು ಹೆದರುತ್ತ ಬರುವುದು ಕಾಣಿಸಿತು.

"ಹೆದರ ಬೇಡ್ವೋ ಹಾಲಪ್ಪಾ, ಬಾ ಬೇಗ! ಎಷ್ಟು ಹೊತ್ತು ನಿನಗಾಗಿ ಕಾಯೋದು!" ಎಂದನು ಚೈತನ್ಯ, ಬೆಪ್ಪು ಬಡಿದವನಂತೆ ಹಾಲಪ್ಪನು ಹತ್ತಿರ ಬಂದ ಕೂಡಲೇ, "ಆ ಮುತ್ತಿನ ಹಾರ ಕಾಳಪ್ಪನ

ಕೈಯಲ್ಲಿ ಸಿಗಲಿಕ್ಕಿಲ್ಲ ಅಂತ ಈಗ ತಿಳಿಯಿತೋ ಹಾಲಪ್ಪಾ. ಸುಮ್ಮನೆ ಕಾಳಪ್ಪನ ಮೇಲೆ ಸಂದೇಹ ಪಟ್ಟೆ, ನಾವು ಅದನ್ನು ಅಂಗಡೀಲೆ ಬಿಟ್ಟು ಬಂದೆವು. ಇದೀಗ ಅಂಗಡಿಯವನೇ ಆ ಮುತ್ತಿನ ಹಾರವನ್ನು ತಂದು ಕೊಟ್ಟ. ನಿನ್ನನ್ನು ಕರೆಯಲು ಜನ ಕಳಿಸ ಬೇಕೆಂದಿದ್ದೆನಪ್ಪಾ. ಎಂದಿನಂತೆ ನಿನ್ನ ಕೆಲಸ ನೋಡಿ ಕೊಂಡಿರು" ಎಂದನು.

ಹಾಲಪ್ಪನು ಎರಡು ಕೈಗಳನ್ನೂ ಜೋಡಿಸಿ ಚೈತನ್ಯನಿಗೆ ನಮಸ್ಕಾರ ಮಾಡಿ, "ಅಯ್ಯಾ, ಹಾರ ವನ್ನು ಕಾಳಪ್ಪನು ಕದ್ದನೆಂದು ನೀವು ಹೇಳಿದ್ದು ನಮಗ್ಗೂ ಒಳ್ಳೇದಾಯಿತು" ಎಂದನು.

"ಅದೇನು ಒಳ್ಳೆಯದು ಎಂದು ಚೈತನ್ಯನು ಆಶ್ಚರ್ಯದಿಂದ ಕೇಳಿದನು.

"ಗುಡಿಸಲಿಗೆ ಹೋದ ಕೂಡಲೇ ನನ್ನ ಹೆಂಡತಿಗೆ ಹೇಳಿ ಅವಳನ್ನು ತಾತನ ಮನೆಗೆ ಓಡಿಸಿದೆ. ಸಾಯಲು ಬಿದ್ದಿರುವ ತಾತ ಏನಾದರೂ ಹಣ ಅಡಗಿಸಿಟ್ಟಿದ್ದರೆ ತನಗೆ ಕೊಡುವರೆಂದು ಆಶೆಪಟ್ಟೇ ಕಾಳಪ್ಪ ಬಂದ ನಂತೆ. ಮುದುಕ ಅದೇನೂ ಇಲ್ಲವೆಂದು ಹೇಳಿದ್ದರಿಂದ ನಾಲ್ಕು ಬೈದು ಹೊರಟುಹೋದನಂತೆ ಆ ಕಾಳಪ್ಪ. ನನ್ನ ಹಂಡತಿ ಬೆಳತನಕ ತಾತನ ಹತ್ತಿರವೇ ಇದ್ದು ಸೇವೆ ಮಾಡಿದಳು. ಮಾತಾಡುವ ಶಕ್ತಿಯಿದ್ದ ಆ ತಾತಯ್ಯ ಹಣ ಅಡಗಿಸಿಟ್ಟ ಜಾಗವನ್ನು ನನ್ನ ಹೆಂಡತಿಗೆ ಹೇಳಿದ್ದಾರೆ. ತಾನು ಸತ್ತು ಹೋದರೆ ಉತ್ತರ ಕ್ರಿಯೆ ನನ್ನಿಂದ ಮಾಡಿಸಬೇಕೆಂತಲೂ ಹೇಳಿದ್ದಾರಂತೆ" ಎಂದನು ಹಾಲಪ್ಪ.

ಆ ಕಾಳಪ್ಪನ ಮೇಲೆ ತಾನು ಅಪೋಹ ಪಟ್ಟುದು ರಿಂದ, ಆ ಮುದುಕನ ಮಾತು ಬಿದ್ದು ಹೋಗುವ ಮೊದಲೇ ಹಾಲಪ್ಪನ ಹೆಂಡತಿ ಅಲ್ಲಿಗೆ ಹೋಗು ವಂತಾಯಿತು.

"ಚೆನ್ನಾಗಿದೆಯೋ ನಿನ್ನ ಅದೃಷ್ಟ ಹಾಲಪ್ಪಾ ! ಆ ತಾತನ ಹಣ ಎಷ್ಟಿದ್ದೀತು ? ಸ್ವಲ್ಪ ಘನವಾಗಿಯೇ ಇದ್ದೀತೋ ?" ಎಂದು ಚೈತನ್ಯನು ಕೇಳಿದನು.

"ದೊಡ್ಡ ಮೊತ್ತವೇ ಇದೆ. ಆ ಹಣದಿಂದ ಸ್ವಂತ ವ್ಯಾಪಾರ ಶುರುಮಾಡಬಹುದು" ಎಂದನು ಹಾಲಪ್ಪ ವಿನಯದಿಂದ.

ಇಂತಹ ಹಾಲಪ್ಪನನ್ನು ರಾತ್ರಿ ತಾನು ಕಠಿಣ ವಾಗಿ ಬೈದುದನ್ನು ನೆನೆದು ಚೈತನ್ಯನು ನೊಂದು ಕೊಂಡನು. ಅವನು ಹಾಲಪ್ಪನನ್ನು ಆಪ್ಯಾಯತೆಯಿಂದ ನೋಡುತ್ತ, "ಒಟ್ಟಿನ ಮೇಲೆ ಆ ಮುತ್ತಿನ ಹಾರವು ನಮ್ಮಿಬ್ಬರಿಗೂ ಒಳ್ಳೆಯದೇ ಮಾಡಿತು. ನಿನ್ನ ಕಾಲ ಮೇಲೆ ನೀನು ನಿಂತುಕೊಳ್ಳುವ ಹಾಗಾದುದನ್ನು ತಿಳಿದು ಸಂತೋಷವಾಯಿತು. ನೀನು ಪ್ರಾರಂಭಿಸುವ ವ್ಯಾಪಾರದಲ್ಲಿ ಏನಾದರೂ ಸಹಾಯ ಬೇಕಾಗಿದ್ದರೆ ಸಂಕೋಚಪಡದೆ ಕೇಳು" ಎಂದನು.



# ಧರ್ಮ ಕಾರ್ಯಗಳು

**ನಾ**ಗಪಟ್ಟಣದಲ್ಲಿ ಚಂದ್ರಗುಪ್ತನೆಂಬವನಿಗೆ ವಜ್ರಗಳ ವ್ಯಾಪಾರ ಮಾಡುವ ಸಮುದ್ರ ವರ್ತಕವೂ ಇದ್ದಿತು. ಅವನು ದೊಡ್ಡ ಧನವಂತನಾಗಿದ್ದರೂ ಎಂತಹ ಧರ್ಮ ಕಾರ್ಯಗಳಿಗೂ, ಯಾವ ವಿರಾಳವನ್ನೂ ಕೊಡುವವನಾಗಿರಲಿಲ್ಲ.

"ನನ್ನನ್ನು ದೊಡ್ಡಲೋಭಿ ಅಂದು ಕೊಳ್ಳಬೇಡಿ. ಧರ್ಮಕಾರ್ಯ ಮೊದಲಾದ ಒಳ್ಳೊಳ್ಳೆಯ ಕಾರ್ಯಗಳಿಗೆ ಇನ್ನೂ ಬೇಕಾದಷ್ಟು ಕಾಲ ನನಗಿದೆ. ಯಾವುದೋ ಒಂದು ದಿನ ಲಕ್ಷಗಟ್ಟಲೆ ಖರ್ಚು ಮಾಡಿ ಪಟ್ಟಣದ ನಡುವಿನಲ್ಲಿ ಅದ್ಭುತವಾದ ದೇವಾಲಯ ಕಟ್ಟಿಸಬಲ್ಲೆನು." ಎಂದು ಚಂದ್ರಗುಪ್ತನು ಆವರಿವರೊಡನೆ ಹೇಳುತ್ತಾ ಇರುವನು.

ಒಂದು ದಿನ ಪೂಜಾರಿಯೊಬ್ಬನು ಚಂದ್ರಗುಪ್ತನ ಬಳಿಗೆ ಬಂದು, ಶಿಥಿಲಾವಸ್ಥೆಯಲ್ಲಿದ್ದ ದೇವಾಲಯವನ್ನು ಪುನರುದ್ಧಾರ ಮಾಡಲು ಏನಾದರೂ ಧನ ಸಹಾಯ ಮಾಡಬೇಕೆಂದು ಕೇಳಿಕೊಂಡನು.

ಅದಕ್ಕೇನೂ ಇಷ್ಟವಿಲ್ಲದಿದ್ದರೂ ಪೂಜಾರಿಯನ್ನು ನೋಡಿ ಚಂದ್ರಗುಪ್ತನಿಗ ಕನಿಕರವಾಯಿತು. ಅವನು ನೂರುವರಹಗಳನ್ನು ತಂದು ಪೂಜಾರಿಗೆ ಕೊಟ್ಟನು.

ಆ ಸಮಯದಲ್ಲಿ ಚಂದ್ರಗುಪ್ತನ ಗುಮಾಸ್ತನು ಓಡುತ್ತಾ ಬಂದು, ಚಂದ್ರಗುಪ್ತನ ಹಡಗು ಬೆಲೆ ಬಾಳುವ ಸರಕುಗಳೊಂದಿಗೆ ಮುಳುಗಿ ಹೋದ ಕೆಟ್ಟ ಸುದ್ದಿ ಹೇಳಿದನು.

ಚಂದ್ರಗುಪ್ತನು ಪೂಜಾರಿಯನ್ನು ನೋಡಿ, ವ್ಯತ್ಯಾಸವಾಗಿ ತಿಳಿಯ ಬೇಡವೆಂದು ಹೇಳಿ, ತಾನುಕೊಟ್ಟ ನೂರುವರಹಗಳನ್ನು ಹಿಂದಿರುಗಿ ಪಡೆದು ಕೋಣೆಯೊಳಗೆ ಹೋದನು. ಪರಿಸ್ಥಿತಿ ಚೆನ್ನಾಗಿಲ್ಲವೆಂದುಕೊಂಡು ಪೂಜಾರಿ ಹೊರಡಲು ನೋಡುವಾಗ, ಚಂದ್ರಗುಪ್ತನು ಬಂದು, ಸಾವಿರವರಹಗಳ ಗಂಟನ್ನು ಕೊಡುತ್ತ, "ಸಂಪತ್ತು ಇರುವಾಗಲೇ ಒಳ್ಳೆಯ ಕೆಲಸ ಮಾಡಬೇಕೆಂದು ಭಗವಂತನು ನನಗೆ ಪಾಠ ಹೇಳುತ್ತಿದ್ದಾನೆ" ಎಂದನು ಮುಗುಳು ನಗುತ್ತ.





# ಅತಿವಿನಯ

**ಹಿಂ**ದೆ ಒಂದು ಊರಿನಲ್ಲಿ ಶಂಕರ ಮತ್ತು ಶಿವ ಸ್ವಾಮಿ ಎಂಬುವರು ಸ್ನೇಹಿತರಾಗಿದ್ದರು. ಅದರಲ್ಲಿ ಶಂಕರನು ಲಕ್ಷಾಧಿಕಾರಿಯಾಗಿದ್ದನು. ಅವನಿಗೆ ಸ್ವಂತ ವ್ಯವಸಾಯವೂ ಇದ್ದಿತು. ಇತರರಿಂದ ಧಾನ್ಯಗಳನ್ನು ಕೊಂಡುಕೊಂಡು ವ್ಯಾಪಾರ ಮಾಡುವುದನ್ನೂ ಇಟ್ಟು ಕೊಂಡಿದ್ದನು. ಅವನ ಹತ್ತಿರ ರಂಗಪ್ಪನೆಂಬುವನು ಗುಮಾಸ್ತನಾಗಿ ಕೆಲಸಮಾಡುತ್ತಿದ್ದನು.

ಶಿವಸ್ವಾಮಿ ಶಂಕರನ ಮನೆಗೆ ಆಗಾಗ ಹೋಗಿ ಬರುತ್ತಿದ್ದನು. ಶಂಕರನು ದೊಡ್ಡ ಸ್ಥಿತಿವಂತನೂ ಗೌರವಶಾಲಿಯೂ ಆದುದರಿಂದ ಅವನ ಬಳಿಗೆ ದಿನಾ ಆಗಾಗ ಯಾರಾದರೂ ಏನೇನೋ ಕೆಲಸಕ್ಕೆ ಬಂದು ಹೋಗುತ್ತಲೇ ಇರುತ್ತಾರೆ. ಅವನ ಹತ್ತಿರ ಮಾತಾಡುವಾಗ ಗೌರವವನ್ನೂ ವಿನಯವನ್ನೂ ತೋರಿಸುತ್ತಾರೆ. ಆದರೆ ಶಂಕರನ ಗುಮಾಸ್ತನು ಶಂಕರನ ಮುಂದೆ ಅಷ್ಟೇನೂ ಮರ್ಯಾದೆ ತೋರಿಸು ತ್ತಿದ್ದಿಲ್ಲ. ಯಜಮಾನನು ಕೇಳುವುದಕ್ಕೆ ಕೂಡಲೇ ತಕ್ಕ ಉತ್ತರವನ್ನು ಕೊಡುತ್ತಾ, ತನ್ನ ಕಾರ್ಯದಲ್ಲಿ ಮಗ್ನನಾಗಿ ಬಿಡುತ್ತಾನೆ, ಗುಮಾಸ್ತನು ತನಗೆ ಮರ್ಯಾದೆ ತೋರಿಸುವುದಿಲ್ಲವೆಂದು ಶಂಕರನು ಅಂದುಕೊಳ್ಳುತ್ತಿರಲಿಲ್ಲ, ಇದನ್ನೆಲ್ಲ ಎಷ್ಟೋಬಾರಿ ಶಿವಸ್ವಾಮಿ ಗಮನಿಸಿಕೊಂಡೇ ಇದ್ದನು.

ಒಂದು ಸಾರಿ ಶಿವಸ್ವಾಮಿ ತೀರ್ಥಯಾತ್ರೆಗೆ ಹೊರಟುಹೋಗಿ ಎರಡು ತಿಂಗಳು ಕಳೆದ ಮೇಲೆ ಊರಿಗೆ ಬಂದನು, ಆ ದಿನ ಸಾಯಂಕಾಲ ಅವನು ಮಿತ್ರ ಶಂಕರನನ್ನು ನೋಡಲು ಬಂದನು. ಆ ಸಮಯದಲ್ಲಿ ಗುಮಾಸ್ತ ರಂಗಪ್ಪನು ಶಂಕರನೊಂದಿಗೆ ಮಾತಾಡಿಕೊಂಡಿದ್ದನು. ಅವನು ಮಾತಾಡುವ ರೀತಿಯಲ್ಲಿ ಬಹಳ ವ್ಯತ್ಯಾಸವಿರುವುದನ್ನು ನೋಡಿ ಶಿವಸ್ವಾಮಿಗೆ ಆಶ್ಚರ್ಯವಾಯಿತು. ಈಗ ರಂಗಪ್ಪ ಕೈಕಟ್ಟಿ ಬಾಗಿದ ಹಾಗೆ ನಿಂತು. "ಅಪ್ಪಣೆ ಸ್ವಾಮಿ, ಹಾಗೆಯೇ. ಒಳ್ಳೇದು, ತಮ್ಮ ದಯ" ಎನ್ನುತ್ತಿದ್ದ.

ರಂಗಪ್ಪ ಆಚೆಗೆ ಹೋದ ಮೇಲೆ ಶಿವಸ್ವಾಮಿ ಶಂಕರನೊಂದಿಗೆ ತನ್ನ ತೀರ್ಥಯಾತ್ರೆಯ ವಿಶೇಷ ಗಳನ್ನು ಕುರಿತು ಸ್ವಲ್ಪ ಹೇಳಿದ ಮೇಲೆ, "ಅಲ್ಲಯ್ಯಾ ಶಂಕರ! ನಿನ್ನ ಗುಮಾಸ್ತ ರಂಗಪ್ಪ ಈ ಎರಡು ತಿಂಗಳಲ್ಲಿ ಬದಲಾದ ಹಾಗೆ ಕಾಣುತ್ತಾನೆ. ಈ ಮೊದಲು ಅವನು ನಿನ್ನ ಮುಂದೆ ಇಷ್ಟೊಂದು ವಿನಯ ವಿಧೇಯತೆ ತೋರಿಸಿದ್ದು ನಾನು ನೋಡಿಲ್ಲ.

ಪಿ. ಎನ್. ಸೋಮು

ನಿನ್ನ ಹತ್ತಿರ ಬರುವವರನ್ನು ನೋಡಿ ನೋಡಿ ಮರ್ಯಾದೆ ಕಲಿತನೆಂದು ಕಾಣುತ್ತದೆ" ಎಂದನು.

ಶಂಕರನು ಅದಕ್ಕೇನೂ ಹೇಳಲಿಲ್ಲ. ಮುಗುಳು ನಕ್ಕು ಸುಮ್ಮನಾಗಿ ಬಿಟ್ಟನು,

ಎಂಟು ದಿನಗಳ ಅನಂತರ ಶಿವಸ್ವಾಮಿ ಮತ್ತೆ ಶಂಕರನ ಮನೆಗೆ ಹೋದನು. ಗುಮಾಸ್ತ ರಂಗಪ್ಪ ಕುಳಿತಿರುವಲ್ಲಿ ಹೊಸಬನೊಬ್ಬನಿದ್ದನು.

ಶಿವಸ್ವಾಮಿ ಆಶ್ಚರ್ಯದಿಂದ ಶಂಕರನೊಂದಿಗೆ "ಇದೇನು ? ರಂಗಪ್ಪನ ಬದಲಿಗೆ ಹೊಸಬನಿರುವ ನಲ್ಲ ? ರಂಗಪ್ಪನಿಗೆ ರಜೆಯೆ ?" ಎಂದು ಕೇಳಿದನು.

"ಹಾಂ; ರಂಗಪ್ಪನನ್ನು ಕೆಲಸದಿಂದ ತೆಗೆದು ಹಾಕಿದೆ. ಇವನು ಹೊಸ ಗುಮಾಸ್ತ" ಎಂದನು ಶಂಕರ.

"ಅದೇನಾಯಿತು ? ಮೊದಲೇನೋ ಅವನು ನಿನ್ನ ಹತ್ತಿರ ಅವಿಧೇಯನಾಗಿದ್ದದ್ದು ನಿಜ. ಮೊನ್ನೆ ನಾನು ಬಂದಾಗ ರಂಗಪ್ಪನು ನಿನ್ನ ಮುಂದೆ ಬಹಳ ವಿನಯ ವಿಧೇಯತೆಯಿಂದಿರುವುದನ್ನು ನೋಡಿ ನನಗೆ ಬಹಳ ತೃಪ್ತಿಯಾಗಿತ್ತು" ಎಂದನು ಶಿವಸ್ವಾಮಿ.

"ಈ ಬದಲಾವಣೆಯ ಕಾರಣದಿಂದಲೇ ಅವನನ್ನು ತೆಗೆದು ಹಾಕಬೇಕಾಗಿ ಬಂತು" ಎಂದನು ಶಂಕರ ಮುಗುಳು ನಗುತ್ತ. ಅವನು ಹೇಳಿದ ಕಾರಣವು ಶಿವಸ್ವಾಮಿಗೆ ವಿಚಿತ್ರವೆನಿಸಿತು. "ಅಲ್ಲಯ್ಯಾ ಶಂಕರಾ, ಮೊದಲು ರಂಗಪ್ಪನಲ್ಲಿ ಯಜಮಾನನ ಮುಂದೆ ಸೇವಕನು ತೋರಿಸಬೇಕಾದ ವಿಧೇಯತೆಯ ರೀತಿ ಏನೂ ಇರಲಿಲ್ಲ. ಊರವರೆಲ್ಲ ನಿನ್ನ ಮುಂದೆ ಬಹಳ ಮರ್ಯಾದೆ ತೋರಿಸುತ್ತಾರಷ್ಟೆ ? ನೀನು ಈ ರಂಗಪ್ಪನನ್ನು ಹೇಗೆ ಸಹಿಸಿಕೊಂಡಿದ್ದೆಯೋ ಅಂದು ಕೊಂಡಿದ್ದೆ. ಮೊನ್ನೆ ನೋಡಿದಾಗ ನನಗೆ ತೃಪ್ತಿಯಾಗಿತ್ತು" ಎಂದನು.

"ಹೌದು. ನಿನಗೆ ತೋರುವ ಆ ಒಳ್ಳೆಯ ಬದಲಾವಣೆಯೇ ನಾನು ಅವನನ್ನು ಅನುಮಾನಿಸಲು ಕಾರಣವಾಯಿತು. ಅವನ ಅಸಹಜವಾದ ವಿನಯ ವಿಧೇಯತೆಗಳನ್ನು ನೋಡಿ, ನಾನು ಸ್ವಲ್ಪ ತನಿಖೆ ನಡೆಸಿದೆ. ನಿಜ ಸಂಗತಿ ಗೊತ್ತಾಯಿತು. ರಂಗಪ್ಪ ಕೆಲಸದಲ್ಲಿ ಗಟ್ಟಿಗ. ಕೀಳು ಚಾಕರೀ ನೌಕರನ ಹಾಗೆ ಪ್ರತಿಯೊಂದಕ್ಕೂ ಗೊಡ್ಡು ಮುಂಡು ಹಾಕಬೇಕಾಗಿಲ್ಲ. ಆದ್ದರಿಂದ ಅವನ ವರ್ತನೆ ಗರ್ವವಾಗಿ ನನಗೆ ಕಾಣಲೂ ಇಲ್ಲ. ಆದರೆ ಈ ನಡುವೆ ನನ್ನ ಮುಂದೆ ಬಾಗಿ ಬಾಗಿ ಅತಿ ವಿನಯ ಪ್ರದರ್ಶನ ಮಾಡುವುದನ್ನು ನೋಡಿ ಸಂದೇಹವಾಯಿತು. ತನಿಖೆ ಮಾಡುವಾಗ ನನ್ನ ಹತ್ತಿರ ಕಾರ್ಯಾರ್ಥವಾಗಿ ಬರುವವರ ಕೈಯಿಂದ ಲಂಚ ಪಡೆಯುತ್ತಾನೆಂದು ತಿಳಿಯಿತು. ಕೂಡಲೇ ಅವನನ್ನು ತೆಗೆದು ಹಾಕಿಬಿಟ್ಟೆ" ಎಂದನು ಶಂಕರ. ಆ ಮಾತಿನೊಳಗಿರುವ ನಿಜವು ಗೊತ್ತಾಗಿ ಶಿವಸ್ವಾಮಿ ಶಂಕರನ ವಿವೇಕವನ್ನು ಮೆಚ್ಚಿಕೊಂಡನು.







ದುರ್ಯೋಧನನ ಮಾವನೆಂದು ಪ್ರಖ್ಯಾತನಾದವನು ಶಕುನಿ. ದುರ್ಯೋಧನನ ತಾಯಿಯಾದ ಗಾಂಧಾರಿಗೆ ಅವನು ತಮ್ಮನು, ಗಾಂಧಾರದ ದೇಶದ ರಾಜನಾದ ಸುಬಲನ ಕುಮಾರನು.

ಗಾಂಧಾರಿಯ ಜಾತಕಫಲದ ಪ್ರಕಾರ ಅವಳಿಗೆ ವೈಧವ್ಯಯೋಗವಿರುವುದೆಂದು ಗೊತ್ತಾದುದರಿಂದ, ಸುಬಲನು ಮೊದಲು ಅವಳಿಗೆ ಟಗರಿನೊಂದಿಗೆ ವಿವಾಹ ಮಾಡಿದ್ದನು. ಅನಂತರ ಹುಟ್ಟು ಕುರುಡನಾಗಿದ್ದ ಧೃತರಾಷ್ಟ್ರನೊಂದಿಗೆ ಅವಳ ವಿವಾಹವಾಗಿತ್ತು. ಆಗ ಜಾತಕ ಫಲದಂತೆ ಅವಳ ಗಂಡನೆನಿಸಿದ ಟಗರು ಸತ್ತುಹೋಗಿತ್ತು.

ಈ ಹಿಂದಿನ ಸಂಗತಿ ಭೀಮನು ದುರ್ಯೋಧನನನ್ನು "ವಿಧವೆಗೆ ಹುಟ್ಟಿದ ಗೋಳಕಾ!" ಎಂದು ಸಂಬೋಧಿಸಿ ನಿಂದಿಸಿದಾಗಲೇ ದುರ್ಯೋಧನನಿಗೆ ಗೊತ್ತಾದುದು.

ಆದರಿಂದ ರೋಷಗೊಂಡ ದುರ್ಯೋಧನನು ಶಕುನಿಯನ್ನೂ, ಅವನ ತಂದೆಯಾದ ಸುಬಲನನ್ನೂ ಹಿಡಿದು ತರಿಸಿ, ಅತ್ಯಂತ ಯಾತನಾಮಯವಾದ ಕಾರಾಗಾರದಲ್ಲಿ ಇರಿಸಿ ತನ್ನ ರೋಷವನ್ನು ಸ್ವಲ್ಪ ಮಟ್ಟಿಗೆ ತಣಿಸಿಕೊಂಡನು.

ಸುಬಲರಾಜನು ದೊಡ್ಡ ತಪಸ್ಸು ಮಾಡಿದವನು. ಅವನು ಸಾಯುವ ಮೊದಲು ತನ್ನ ಅಸ್ಥಿಕೆಗಳಿಂದ ದಾಳಗಳನ್ನು ತಯಾರುಮಾಡಿಸಿ ದುರ್ಯೋಧನನ ಮೇಲೆ ಪ್ರತೀಕಾರ ಮಾಡಬೇಕೆಂದು ಶಕುನಿಗೆ ಹೇಳಿ ಸತ್ತುಹೋಗಿದ್ದನು.

ತಂದೆಯ ತಪೋ ಮಹಿಮೆಯ ಅಸ್ಥಿಕೆಗಳಿಂದ ಮಾಡಲ್ಪಟ್ಟ ದಾಳಗಳಿಂದ ಜೂಜಾಡಿದರೆ ಶಕುನಿ ಯಾವ ಅಂಕೆ ಬೇಕೆಂದುಕೊಳ್ಳುವನೋ ಅದೇ ಅಂಕೆ ಬರುತ್ತಿತ್ತು.

ಶಕುನಿಯ ಹತ್ತಿರವಿರುವ ಈ ಅದ್ಭುತವಾದ ದಾಳಗಳ ಸಂಗತಿ ಕಾರಾಗಾರದ ಪಾಲಕರಿಂದ ದುರ್ಯೋಧನನಿಗೆ ಗೊತ್ತಾಯಿತು. ಆಗ ದುರ್ಯೋಧನನು ಸೋದರಮಾವ ಶಕುನಿಯನ್ನು ಬಿಡುಗಡೆ ಮಾಡಿಸಿ, ಕ್ಷಮೆ ಕೇಳಿ, ತನ್ನ ಮಂತ್ರಿಯಾಗಿ ಮಾಡಿ



ಕೊಂಡನು. ತಾಯಿಯ ವಿಷಯದಲ್ಲಿ ತನಗೆ ಬಂದ ಕೋಪಕ್ಕೆ ಶಕುನಿಯದೇನೂ ತಪ್ಪಿಲ್ಲವೆಂದು ದುರ್ಯೋಧನನು ಶಕುನಿಯ ಮೇಲೆ ಪ್ರಿಯವಾಗಿಯೇ ಇದ್ದನು. ಶಕುನಿಯೂ ಅವನ ಹಿತಚಿಂತಕನಂತೆ ಪ್ರವರ್ತಿಸಿಕೊಂಡಿದ್ದನು.

ಹಸ್ತಿನಾಪುರದಲ್ಲಿ ಶಕುನಿ ಪಾಂಡವರನ್ನು ಜೂಜಾಡಲು ಕರೆಯಿಸಿ, ಧರ್ಮರಾಜನೊಂದಿಗೆ ಜೂಜಾಡಿ ಧರ್ಮರಾಜನನ್ನು ಪೂರ್ತಿ ಸೋಲಿಸಿದನು. ತಮ್ಮಂದಿರನ್ನೂ ದ್ರೌಪದಿಯನ್ನೂ ಪಣವೊಡ್ಡಿ ಸೋತನು ಧರ್ಮರಾಜ.

ಅದೇ ಸಮಯದಲ್ಲಿ ಕೃಷ್ಣನು ದ್ವಾರಕೆಯಲ್ಲಿ ಸತ್ಯಭಾಮೆಯೊಂದಿಗೆ ವಿನೋದವಾಗಿ ಜೂಜಾಡುತ್ತಾ, ತನ್ನನ್ನೂ, ರುಕ್ಮಿಣಿ ಮೊದಲಾದ ಏಳು ಮಂದಿ ಮಹಿಷಿಯರನ್ನೂ ಪಣವಿಟ್ಟು ಸೋತನು.

ಸತ್ಯಭಾಮೆ ರುಕ್ಮಿಣಿಯನ್ನು ನೋಡಿ, "ಅಕ್ಕಾ, ಈಗ ನೀನೂ ನಮ್ಮ ನಾಥನೂ ನನ್ನ ಸೊತ್ತು, ನಿಮ್ಮನ್ನು ನಾನು ವಿಕ್ರಯ ಅಂತ ಏನು ಮಾಡಲಿಕ್ಕೂ ಸರ್ವಾಧಿಕಾರವೂ ನನಗಿದೆ. ಎಂದು ಪರಿಹಾಸವಾಗಿ ಹೇಳುತ್ತ, ರುಕ್ಮಿಣಿಯ ಸೆರಗಿನ ತುದಿಯನ್ನು ತನ್ನ ಕೈಗೆ ಸಿಕ್ಕಿಸಿಕೊಂಡಳು.

ಆಗ ಕೃಷ್ಣನು ಎತ್ತಲೋ ನೋಡಿ ಕಿವಿಗೊಟ್ಟು ಏನನ್ನೋ ಕೇಳಿ "ಅಕ್ಷಯವಾಗಲಿ!" ಎಂದನು.

ಹಾಗೆ ಏಕೆ ಹೇಳಿದನೆಂದು ತಿಳಿಯದೆ, ಎಲ್ಲರೂ ಬೆಪ್ಪು ಬೆರಗಾಗಿ ಅತ್ತಿತ್ತ ನೋಡಿದರು.

ಅದೇ ಸಮಯದಲ್ಲಿ ಹಸ್ತಿನಾಪುರದಲ್ಲಿ ತುಂಬಿದ ಸಭೆಯಲ್ಲಿ ದುಶ್ಶಾಸನನು ದ್ರೌಪದಿ ಉಟ್ಟಿದ್ದ ಸೀರೆಯ ಸೆರಗು ಹಿಡಿದು ಎಳೆಯುತ್ತಿರವಾಗ, ಅಸಹಾಯಕಳಾದ ದ್ರೌಪದಿ ಎರಡು ಕೈಗಳನ್ನೂ ಮೇಲೆತ್ತಿ "ಕೃಷ್ಣಾ!" ಎಂದು ಮೊರೆ ಇಡುತ್ತಿದ್ದಳು.

ದುಶ್ಶಾಸನನ ಎದೆಯನ್ನು ಸೀಳಿ ರಕ್ತ ಕುಡಿಯುವೆನೆಂದು, ದುರ್ಯೋಧನನ ತೊಡೆಯನ್ನು ಒಡೆದು ಹಾಕುವೆನೆಂದು ಭೀಮನು ಭಯಂಕರ ಪ್ರತಿಜ್ಞೆ ಮಾಡಿದನು.

ದುಶ್ಶಾಸನನು ಎಳೆಯುತ್ತಿದ್ದ ಹಾಗೆಯೇ ದ್ರೌಪದಿಯ ಭುಜಗಳ ಮೇಲಿನಿಂದ ವಸ್ತ್ರಗಳು ಅಕ್ಷಯವಾಗಿ ಬರುತ್ತಲೇ ಇದ್ದುವು. ಸಭೆಯಲ್ಲಿ ವಸ್ತ್ರದ ರಾಶಿಯೇ ಆಗಿ, ದುಶ್ಶಾಸನನ ತೋಳುಗಳು ಸೋತುಹೋದುವು. ಅವನು ಬೆವರಿ ನೀರಾಗಿ ಬಳಲಿ ಬಂದು ಬಿದ್ದನು.

ದ್ರೌಪದಿ ಮಯಸಭೆಯಲ್ಲಿ ನಕ್ಕಳೆಂದು ಪ್ರತೀಕಾರ ಮಾಡಲು, ದುರ್ಯೋಧನನು ಹೀಗೆ ಅವಳ ವಸ್ತ್ರಾಪಹರಣಕ್ಕೆ ಎಳಸಿದನು. ಕಡೆಗೆ ಅವನು ಬಗ್ಗಿದ ತಲೆಯನ್ನು ಎತ್ತದೆ ಕರ್ಣ, ಶಕುನಿ, ದುಶ್ಶಾಸನಾದಿಗಳೊಂದಿಗೆ ಸಭೆಯಿಂದ ಹೊರಟುಹೋದನು.

ದುರ್ಯೋಧನ, ಕರ್ಣ, ಶಕುನಿ, ದುಶ್ಶಾಸನ ಈ ನಾಲ್ವರೂ ದುಷ್ಟ ಚತುಷ್ಟಯರೆಂದು ಹೆಸರು ಪಡೆದರು.

ಕ್ರೋಧ, ಲೋಭ, ಮದ, ಮತ್ಸರ ಮೊದಲಾದ ಗುಣಗಳಿಗೂ, ಅಧರ್ಮಕ್ಕೂ ಮೂಲನಾದ ಕಲಿ ಪುರುಷನು ದುರ್ಯೋಧನನಾಗಿ ಹುಟ್ಟಿದ್ದನು.

ನರನಾರಾಯಣರಿಗೆ ಬೆನ್ನು ತೋರಿಸಿ ಒಂದೇ ಒಂದು ಕವಚದೊಂದಿಗೆ ಓಡಿಹೋಗಿ, ಸೂರ್ಯನಲ್ಲಿ ಅಡಗಿಕೊಂಡ ಸಹಸ್ರ ಕವಚನೇ, ಕನ್ಯೆಯಾಗಿದ್ದ ಕುಂತೀದೇವಿಗೆ ಸೂರ್ಯನಿಂದ ಕೊಡಲ್ಪಟ್ಟ ವರ ಪ್ರಸಾದವಾಗಿ ಹುಟ್ಟಿ, ಕರ್ಣನೆಂದು ಹೆಸರು ಪಡೆದವನು.

ಮುಂದೆ ಕುಂತಿ ಪಾಂಡುರಾಜನನ್ನು ಮದುವೆ ಯಾದ ಮೇಲೆ ನರನು ಅವಳ ಹೊಟ್ಟೆಯಲ್ಲೇ ಹುಟ್ಟಿ ಅರ್ಜುನನೆನಿಸಿದನು.

ನಾರಾಯಣನು ಕೂಡಾ ದೇವಕಿಯ ಮಗನಾಗಿ ಹುಟ್ಟಿದ ಕೃಷ್ಣನೇ. ಕೃಷ್ಣಾರ್ಜುನರು ಬಾವ ಮೈದುನ ರಾಗಿದ್ದರು.



ಕನ್ಯೆಯಾಗಿದ್ದ ಕುಂತಿ ಆಗ ಹುಟ್ಟಿದ ಕರ್ಣನನ್ನು ನದಿಯಲ್ಲಿ ತೇಲಿಸಿಬಿಟ್ಟಿದ್ದಳು. ಆ ಮಗು ಸೂತನ ಕೈಗೆ ಸಿಕ್ಕಿತ್ತು. ಸೂತನ ಪತ್ನಿ ರಾಧೆ ಕರ್ಣನನ್ನು ಬೆಳೆಸಿದಳು.

ಅಂತಲೇ ರಾಧೇಯನೆಂದೂ, ಸೂತ ಪುತ್ರನೆಂದೂ ಅನಿಸಿಕೊಂಡ ಕರ್ಣನನ್ನು ದುರ್ಯೋಧನನು ಅಂಗ ದೇಶಕ್ಕೆ ರಾಜನನ್ನಾಗಿ ಮಾಡಿ, ತನಗೆ ಸರಿಸಮ ನಾದ ಮಿತ್ರನಾಗಿಸಿಕೊಂಡನು, ಕರ್ಣನ ಮೈತ್ರಿ ದುರ್ಯೋಧನನಿಗೆ ದೊಡ್ಡ ಹೆಮ್ಮೆಯ ವಿಷಯ ವಾಗಿತ್ತು. ಅವನ ಮೇಲೆ ದುರ್ಯೋಧನನಿಗೆ ತುಂಬಾ ಅಭಿಮಾನ.

ಕರ್ಣನಿಗೆ ಅನೇಕ ಅನರ್ಥಗಳೂ, ಶಾಪಗಳೂ ಇದ್ದುವು. ದಾನಶೂರನಾದ ಅವನು ಸಹಜವಾಗಿದ್ದ ತನ್ನ ಕವಚಕುಂಡಲಗಳನ್ನು ಬ್ರಾಹ್ಮಣ ಭಿಕ್ಷುಕನಾಗಿ ಬಂದು ಕೇಳಿದ ಇಂದ್ರನಿಗೆ ದಾನಮಾಡಿಬಿಟ್ಟನು. ಆದರೂ ಸ್ವಶಕ್ತಿಯ ಮೇಲೆ ಅತಿ ವಿಶ್ವಾಸದಿಂದ ದುರ್ಯೋಧನನ ನಂಬುಗೆಯನ್ನು ಬಲಪಡಿಸುತ್ತ, ಪ್ರೋತ್ಸಾಹಿಸುತ್ತಲೇ ಬಂದಿದ್ದನು ಕರ್ಣ.

ತನ್ನ ಪ್ರತ್ಯರ್ಥಿಯಾದ ಅರ್ಜುನನನ್ನು ಯುದ್ಧ ದಲ್ಲಿ ಕೊಲ್ಲಬೇಕೆಂದು ಕರ್ಣನ ಆಶಯ, ಅದಕ್ಕೇ ಅವನು ದುರ್ಯೋಧನನೊಂದಿಗೆ ಸೇರಿಕೊಂಡಿದ್ದನು.

ಪಾಂಡವರು ಜೂಜಿನಲ್ಲಿ ಸೋತು ಅರಣ್ಯವಾಸಕ್ಕೆ ಹೋದರು.

ಸತ್ಯಭಾಮೆ ತಾನು ಜೂಜಿನಲ್ಲಿ ಗೆದ್ದುಕೊಂಡ ಕೃಷ್ಣನನ್ನು ನಾರದನಿಗೆ ದಾನವಾಗಿ ಕೊಡುವ ಪುಣ್ಯಕ ವ್ರತವನ್ನು ಆಚರಿಸಿದಳು. ಕೃಷ್ಣನ ಭಾರಕ್ಕೆ ಸರಿ ದೂಗುವಷ್ಟು ಬಂಗಾರವನ್ನೂ ರತ್ನಗಳನ್ನೂ ಕೊಟ್ಟರೆ ಹೊರತು ಕೃಷ್ಣನನ್ನು ಕೊಡಲಾರೆನೆಂದನು ನಾರದ. ಆಗ ಸತ್ಯಭಾಮೆ ಕೃಷ್ಣನ ತುಲಾಭಾರವನ್ನು ಕೈಕೊಂಡು, ತನ್ನಲ್ಲಿದ್ದ ಸುವರ್ಣ, ರತ್ನ, ಧನರಾಶಿ ಗಳನ್ನೆಲ್ಲಾ ತಕ್ಕಡಿಯಲ್ಲಿ ಸುರಿದರೂ ಕೃಷ್ಣನ ಭಾರಕ್ಕೆ ಸರಿದೂಗಲಿಲ್ಲ. ಕಡೆಗೆ ರುಕ್ಮಿಣಿ ಭಕ್ತಿಯಿಂದ ತುಳಸೀ



ದಳವನ್ನು ತಕ್ಕಡಿಯಲ್ಲಿಟ್ಟ ಕೂಡಲೇ ಭಾರ ಸರಿಯಾಗಿ, ಕೃಷ್ಣನಿಗೆ ನಾರದನಿಂದ ಬಿಡುಗಡೆ ಸಿಕ್ಕಿತು.

ಆಗ ಸತ್ಯಭಾಮೆ ರುಕ್ಮಿಣಿಯೊಂದಿಗೆ, "ಅಕ್ಕಾ, ಈಗ ನಾನು ನಿನಗೆ ದಾಸಿಯಾದೆನು. ಭಕ್ತಿ ಮಾತ್ರವೇ ಕೃಷ್ಣನ ಸಮಭಾರದ್ದು ಎಂಬ ಅಮೋಘವಾದ ಜ್ಞಾನ ಭಿಕ್ಷೆಯನ್ನು ನೀನು ನನಗೆ ಕೊಟ್ಟಿರುವಿ" ಎಂದಳು.

ಮುಂದೆ ಪಾಂಡವರು ದ್ರೌಪದಿಯೊಂದಿಗೆ ಮತ್ಸ್ಯ ದೇಶದ ವಿರಾಟ ರಾಜನ ಹತ್ತಿರ ಅಜ್ಞಾತವಾಸವನ್ನು ಮಾಡಿದರು. ಅಲ್ಲಿ ವಲಲನೆಂಬ ಹೆಸರಿನಿಂದ ಭೀಮನು ಅಡಿಗೆಯವನಾಗಿದ್ದನು. ರಾಣಿಯ ಹತ್ತಿರ ಸೈರಂಧ್ರಿಯಾಗಿದ್ದ ದ್ರೌಪದಿಯನ್ನು ಅವಮಾನ ಪಡಿಸಿದ ಕೀಚಕನು, ಭೀಮನ ಕೈಗೆ ಸಿಕ್ಕಿಬಿದ್ದು ಜಜ್ಜಿ ಮುದ್ದೆಯಾಗಿ ಸತ್ತನು. ಆ ಕಾಲದಲ್ಲಿ ಸಮಬಲರೆನಿಸಿದ ಐವರಲ್ಲಿ ಮೂವರು ಭೀಮನ ಕೈಯಲ್ಲಿಯೇ ಹತರಾಗಿ ಹೋದರು. ಇನ್ನು ದುರ್ಯೋಧನನೊಬ್ಬನೇ ಉಳಿದಿದ್ದನು.

ಅರ್ಜುನನು ಬೃಹನ್ನಳೆ ಎಂಬ ಹೆಸರಿನಿಂದ ಶಿಖಂಡಿ ಎನಿಸಿ ರಾಜಕುಮಾರಿ ಉತ್ತರೆಗೆ ನಾಟ್ಯವನ್ನು ಕಲಿಸುವವನಾದನು. ಉತ್ತರ ಗೋಗ್ರಹಣದಲ್ಲಿ ಅರ್ಜುನನು ನಿಜರೂಪದಿಂದ ಯೋಧಾನುಯೋಧರೊಂದಿಗೆ ಕೂಡಿದ ಕೌರವರ ಸೈನ್ಯವನ್ನು ಪೂರ್ತಿ ಸೋಲಿಸಿ ಓಡಿಸಿಬಿಟ್ಟನು.

ಸುಭದ್ರಾರ್ಜುನರ ಕುಮಾರನಾದ ಅಭಿಮನ್ಯುವಿಗೆ ಉತ್ತರೆಯೊಂದಿಗೆ ಮದುವೆಯಾಯಿತು.

ಪಾಂಡವರು ವನವಾಸ ಮಾಡಿಕೊಂಡಿದ್ದಾಗ ಸುಭದ್ರೆ ತನ್ನ ಮಗ ಅಭಿಮನ್ಯುವೊಂದಿಗೆ ದ್ವಾರಕೆಯಲ್ಲೇ ಇದ್ದಳು. ಬಲರಾಮನ ಕುಮಾರಿ ಶಶಿರೇಖೆಯನ್ನು ಅಭಿಮನ್ಯುವಿಗೆ ಕೊಡದೆ, ದುರ್ಯೋಧನನ ಕುಮಾರನಾದ ಲಕ್ಷ್ಮಣಕುಮಾರನಿಗೆ ಕೊಡುವುದೆಂದು ಬಲರಾಮನು ನಿಶ್ಚಯಿಸಿದ್ದನು.

ಅಭಿಮನ್ಯು ತಾಯಿಯೊಂದಿಗೆ ದ್ವಾರಕೆಯನ್ನು ಬಿಟ್ಟು, ಅರಣ್ಯ ಮಾರ್ಗದಲ್ಲಿ ಹೋಗುತ್ತಿರುವಾಗ ಘಟೋತ್ಕಚನು ಅವರನ್ನು ಸಂಧಿಸಿದನು. ಅವನು ಹಿಡಿಂಬಿಯಲ್ಲಿ ಹುಟ್ಟಿದ ಭೀಮನ ಮಗ.

ಘಟೋತ್ಕಚನು ತನ್ನ ರಾಕ್ಷಸ ಸಮೂಹದೊಂದಿಗೆ ಮಾಯಾಜಾಲವನ್ನು ಪಸರಿಸಿ, ಮದುವೆಗೆ ಬಂದಿದ್ದ ವರನ ಕಡೆಯವರನ್ನು ಆಟವನ್ನಾಡಿಸಿ, ಶಶಿರೇಖೆಯನ್ನು ಎತ್ತಿಕೊಂಡು ಹೋಗಿ ಅಭಿಮನ್ಯುವಿನೊಂದಿಗೆ ಅವಳ ಮದುವೆ ಮಾಡಿಸಿದನು. ಅಷ್ಟಕ್ಕೆ ಬಿಡದೆ ಅವನು ಮಾಯಾ ಶಶಿರೇಖೆಯಾಗಿ, ದ್ವಾರಕೆಯಲ್ಲಿ ಹಸೆಮಣೆಯ ಮೇಲೆ ಕುಳಿತು ಇನ್ನಿಷ್ಟು ನಾಟಕದಾಟ ಆಡಿಸಿದನು.

ಅನಂತರ ಕೃಷ್ಣನು ಅಣ್ಣನಾದ ಬಲರಾಮನನ್ನು ಒಳ್ಳೆಯ ಮಾತುಗಳಿಂದ ಸಮಾಧಾನಪಡಿಸಿ, ಶಶಿರೇಖಾ ಅಭಿಮನ್ಯುಗಳ ವಿವಾಹವು ವೈಭವದಲ್ಲಿ ನಡೆಯುವಂತೆ ಮಾಡಿದನು. ಸೋದರಳಿಯನಾಗಿ ಹುಟ್ಟಿದ ಕೃಷ್ಣನ ಕೈಯಲ್ಲೇ ಕಂಸನ ಶರೀರವನ್ನು

ಬಿಟ್ಟುಹೋದ ಕಾಲನೇಮಿಯೇ ಕೃಷ್ಣನ ಸೋದರಳಿಯ ಅಭಿಮನ್ಯುವಾಗಿ ಹುಟ್ಟಿದ್ದನು.

ಕಾಲನೇಮಿ ಚಿರವಿರೋಧಿಯಾದರೂ ತನ್ನ ಸೋದರಳಿಯನಾಗಿ ಹುಟ್ಟಿದುದರಿಂದ, ಯುವಕ ವೀರರೊಳಗೆ ಅಭಿಮನ್ಯು ಧ್ರುವತಾರೆಯಾಗಿ ಚಿರಕೀರ್ತಿ ಹೊಂದುವಂತೆ ಮಾಡಬೇಕೆಂದು ಕೃಷ್ಣನ ಸಂಕಲ್ಪವಾಗಿತ್ತು.

ಸುಭದ್ರೆ ಗರ್ಭಧಾರಿಣಿಯಾಗಿರುವಾಗ, ಅರ್ಜುನನು ಅವಳೊಂದಿಗೆ ರಣರಂಗದ ವಿಷಯ ಮಾತಾಡುತ್ತ, ಪದ್ಮವ್ಯೂಹವನ್ನು ಹೇಗೆ ಭೇದಿಸಿ ಒಳಗೆ ನುಗ್ಗಬೇಕೆಂಬುದನ್ನು ವಿವರಿಸಿದನು. ಆಗ ಪಕ್ಕದಲ್ಲಿದ್ದ ಕೃಷ್ಣನು, "ಅರ್ಜುನಾ, ನನ್ನ ತಂಗಿ ಸುಭದ್ರೆಯ ಮನಸ್ಸು ಬಹಳ ಕೋಮಲವಾದುದು. ಅದರ ಮೇಲೆ ಗರ್ಭಿಣಿಯಾಗಿರುವಾಗ ಭಯಂಕರವಾದ ರಣರಂಗದ ವಿಷಯ ಏಕೆ ಹೇಳುವಿ?" ಎಂದು ತಡೆದು, ಏನೋ ಕೆಲಸದ ನಿಮಿತ್ತಮಾಡಿ ಅರ್ಜುನನನ್ನು ಕರೆದುಕೊಂಡು ಹೋದನು.

ಆಗ ಗರ್ಭದೊಳಗಿದ್ದ ಅಭಿಮನ್ಯು ಪದ್ಮವ್ಯೂಹದೊಳಗೆ ನುಗ್ಗುವ ವಿಷಯ ಮಾತ್ರವೇ ಕೇಳಿದ್ದನು. ಹೊರಗೆ ಬರುವ ಮಾರ್ಗ ಹೇಗೆಂಬುದನ್ನು ಕೇಳಿರಲಿಲ್ಲ.

ಮುಂದೆ ಯುವಕನಾದ ಬಿಸಿ ರಕ್ತದ ಅಭಿಮನ್ಯು ಧರ್ಮರಾಜನೊಂದಿಗೆ, "ದೊಡ್ಡಪ್ಪಾ, ಈ ಕೃಷ್ಣ ಮಾವ ಹತ್ತಿರವಿಲ್ಲದಿದ್ದರೂ ರಾಜ್ಯವು ನಮ್ಮದೇ. ಈ ಕೌರವರನ್ನು ಹತಮಾಡಲು ನಾನೊಬ್ಬನೇ ಸಾಕು" ಎಂದು ಶೌರ್ಯದ ಮಾತು ಹೇಳುತ್ತಿದ್ದನು. ಆಗ ಕೃಷ್ಣನು ನಗುತ್ತ, ಸೋದರಳಿಯನ ತೋಳು ತಟ್ಟಿ, "ಅಭಿಮನ್ಯು ಕುಮಾರಾ! ನೀನು ಅಂಥವನೇ ನಿಜವಪ್ಪಾ! ನಿನ್ನಂಥ ವೀರ ಪ್ರವರನ ಕೀರ್ತಿ ಚಿರಸ್ಥಾಯಿಯಾಗಿ ನಿಲ್ಲುತ್ತದೆ. ಬಾಲವೀರರಿಗೆ ನೀನೇ ಆದರ್ಶನಾಗುವಿ. ನಿನ್ನನ್ನು ಹೆತ್ತ ವೀರ ಮಾತೆ



ಸುಭದ್ರೆ ನಮ್ಮ ತಂಗಿಯಾಗಿರುವುದಕ್ಕೆ ನಾನು ಹೆಮ್ಮೆ ಪಡುತ್ತೇನೆ" ಎಂದು ಪ್ರೋತ್ಸಾಹಗೊಳಿಸಿದನು.

ಉತ್ತರೆಯ ವಿವಾಹವಾದಮೇಲೆ, ಉತ್ತರಾಭಿಮನ್ಯುಗಳು ವಿರಾಟ ನಗರದಲ್ಲಿ ಆನಂದ ಡೋಲಿಕೆಯಲ್ಲಿ ಓಲಾಡುತ್ತಿದ್ದರು.

ಪಾಂಡವರ ಅಜ್ಞಾತವಾಸವು ಜಯಪ್ರದವಾಗಿ ಮುಗಿದ ಮೇಲೆ, ಕೌರವರನ್ನು ನಿರ್ಮೂಲ ಮಾಡಬೇಕೆಂದು ಪಾಂಡವರೂ, ಪಾಂಡವರನ್ನು ನಿರ್ನಾಮ ಮಾಡಬೇಕೆಂದು ಕೌರವರೂ ಯುದ್ಧ ಮಾಡಲು ಸಿದ್ಧರಾದರು.

ಅತ್ತ ಕಡೆಯಿಂದ ದುರ್ಯೋಧನನೂ, ಇತ್ತ ಕಡೆಯಿಂದ ಅರ್ಜುನನೂ ಕೃಷ್ಣನ ಸಹಾಯವನ್ನು ಕೇಳಲು ಬಂದರು.

ಆಗ ನಿದ್ರೆ ಮಾಡಿಕೊಂಡಿದ್ದ ಕೃಷ್ಣನು ಏಳುತ್ತ ತನ್ನ ಪಾದದ ಹತ್ತಿರ ಕುಳಿತಿದ್ದ ಅರ್ಜುನನನ್ನು ಮೊದಲು ನೋಡಿ, ಆಮೇಲೆ ಮುಖ



ತಿರುಗಿಸಿ ದುರ್ಯೋಧನನನ್ನು ನೋಡಿದನು. ಮುಗುಳ್ನಗುತ್ತ ಅವರ ಉದ್ದೇಶವನ್ನು ತಿಳಿದು, ತಾನು ಯಾವ ಆಯುಧವನ್ನೂ ಧರಿಸಿ ಯುದ್ಧ ಮಾಡಲಾರೆನೆಂದು ಹೇಳಿ, ಇಂತಹ ತಾನು ಮಾತ್ರ ಒಂದು ಭಾಗದವನೆಂದೂ, ಯುದ್ಧ ವೀರರಾದ ಯಾದವ ಸೇನೆಗಳೆಲ್ಲಾ ಇನ್ನೊಂದು ಭಾಗವೆಂದೂ ಹೇಳಿ, "ನಾನು ಮೊದಲು ಅರ್ಜುನನನ್ನೇ ನೋಡಿದೆನು. ಮೊದಲು ಅರ್ಜುನನೇ ಬೇಕಾದುದನ್ನು ಆರಿಸಿಕೊಳ್ಳಲಿ" ಎಂದನು ಕೃಷ್ಣ.

ಕೃಷ್ಣನೇ ತನ್ನ ಭಾಗಕ್ಕೆ ಇರಲಿ ಎಂದನು ಅರ್ಜುನ.

ಯಾದವ ಸೈನ್ಯವೆಲ್ಲವೂ ತನಗೇ ದಕ್ಕಿತೆಂದು ದುರ್ಯೋಧನನಿಗೆ ಬಹಳ ಸಂತೋಷವಾಯಿತು.

ಧೃತರಾಷ್ಟ್ರನು ಹೇಳಿದಂತೆ ಸಂಜಯನು ಪಾಂಡವರ ಬಳಿಗೆ ಬಂದು, ಯುದ್ಧವು ಒಳ್ಳೆಯದಲ್ಲವೆಂದು ವಿವರಿಸುತ್ತ, ಶಾಂತಿಯ ಮಾತುಗಳನ್ನು ಹೇಳಿದನು.

ಅದನ್ನು ಅನುಸರಿಸಿ ಪಾಂಡವರು ಕೃಷ್ಣನನ್ನು ದುರ್ಯೋಧನನ ಬಳಿಗೆ ತಮ್ಮ ಕಡೆಯ ರಾಯಭಾರಿಯಾಗಿ ಕಳುಹಿಸಿದರು.

ಪಾಂಡವರಿಗೆ ಅರ್ಧರಾಜ್ಯವನ್ನು ಕೊಡಲು ಸಾಧ್ಯವಿಲ್ಲದಿದ್ದರೆ ಇಂದ್ರಪ್ರಸ್ಥ ಮೊದಲಾದ ಐದು ಊರುಗಳನ್ನು ಕೊಟ್ಟರೂ ಸಾಕೆಂದು ಕೃಷ್ಣನು ಪಾಂಡವರ ಪರವಾಗಿ ಹೇಳಿದನು. ತಾನು ಶಾಂತಿಯನ್ನು ಕೋರಿಕೊಂಡು ಸಂಧಿಮಾಡಿಸಲು ಬಂದವನೆಂದೂ ಯುದ್ಧವು ಒಳ್ಳೆಯದಲ್ಲವೆಂದೂ ನಯವಾಗಿ ಹೇಳಿದನು ಕೃಷ್ಣ.

ಸೂಜಿಯ ಮೊನೆ ಊರುವಷ್ಟು ಸ್ಥಳ ಕೂಡಾ ಪಾಂಡವರಿಗೆ ಕೊಡಲಾರೆನೆಂದು ದುರ್ಯೋಧನನು ಕಡು ಖಂಡಿತವಾಗಿ ಹೇಳಿಬಿಟ್ಟನು.

ಆಗ ಕೃಷ್ಣನು "ನೆನಪಿಟ್ಟುಕೋ ದುರ್ಯೋಧನಾ! ಹನುಮಂತನ ವಿಜಯಪತಾಕೆ ಹಾರುತ್ತಿರಲು, ನಾನು ಸಾರಥಿಯಾಗಿರುವ ರಥದ ಮೇಲೆ ಅರ್ಜುನನು ಗಾಂಡೀವವನ್ನು ಧರಿಸಿ ನಿನ್ನ ಸೇನೆಗಳನ್ನೆಲ್ಲಾ ಚೆಂಡಾಡುವಾಗ, ಹತ್ತು ಸಾವಿರಮಂದಿ ಕರ್ಣರಿದ್ದರೂ ಒಬ್ಬನೂ ಉಳಿಯಲಾರ. ನಿನ್ನ ಮೊರೆ ಕೇಳುವವರೇ ಇರಲಾರರು. ನನ್ನ ಮಾತು ನಂಬು!" ಎಂದು ಸಭಾಂಕಣವೆಲ್ಲಾ ಮಾರ್ಮೊಳಗುವಂತೆ ಗಂಭೀರ ಧ್ವನಿಯಿಂದ ಹೇಳಿದನು.

"ದೂತನಾಗಿ ಬಂದ ನೀನು ಗರ್ವದ ಮಾತುಗಳಿಂದ ಬೆದರಿಸುವಿಯಾ? ಈ ಪ್ರಗಲ್ಭದ ಬಂಟನನ್ನು ಬಂಧಿಸಿರಿ!" ಎಂದು ದುರ್ಯೋಧನನು ದುಶ್ಶಾಸನನಿಂದ ಉಕ್ಕಿನ ಸಂಕಲೆಯನ್ನು ತರಿಸಿದನು. ಆಗ ಕೃಷ್ಣನೊಂದಿಗಿದ್ದ ಸಾತ್ಯಕಿ ಕತ್ತಿ ಹಿರಿದನು.

ಕೃಷ್ಣನು ಸಾತ್ಯಕಿಯನ್ನು ತಡೆದು, "ಬರಿಗೈಯಲ್ಲಿ ಸಂಧಿ ಕುದುರಿಸಬೇಕೆಂದು ಬಂದವನು ನಾನು. ನನ್ನನ್ನು ಬಂಧಿಸುವುದು ನ್ಯಾಯವೋ? ನಿನ್ನ ಬಳಗವು ಬಹು ದೊಡ್ಡದು! ಬುದ್ಧಿಗೆಟ್ಟು ಬಂದೆನು! ಏನು ಮಾಡಲಿ? ಬಂಧಿಸಿರಿ!" ಎಂದನು.

ದುಷ್ಟಚತುಷ್ಟಯರು ಕೃಷ್ಣನನ್ನು ಸುತ್ತಿಕೊಂಡು ಬಂಧಿಸಲು ನೋಡುವಾಗ, ಕೃಷ್ಣನು ಮಹೋನ್ನತವಾದ ವಿಶ್ವರೂಪವನ್ನು ಧರಿಸಿದನು. ಭಯಭೀತರಾದ ದುರ್ಯೋಧನಾದಿಗಳು ಓಡಿಹೋದರು. ಶಾಂತನಾಗುವಂತೆ ಧೃತರಾಷ್ಟ್ರನು ಕೃಷ್ಣನನ್ನು ಬೇಡಿಕೊಂಡನು.

ಅಂತೂ ನಯಭಯಗಳಿಂದ ಹೇಳಿದ ಕೃಷ್ಣನ ರಾಯಭಾರವು ವಿಫಲವಾಯಿತು.

ಕುರುಕ್ಷೇತ್ರದಲ್ಲಿ ಅನೇಕ ಅಕ್ಷೌಹಿಣೀ ಸಂಖ್ಯೆಯಲ್ಲಿ ಸೇರಿದ, ಅನೇಕ ರಾಜರೊಡಗೂಡಿದ ಉಭಯ ಪಕ್ಷಗಳ ಮಹಾಭಾರತ ಯುದ್ಧವು ಪ್ರಾರಂಭವಾಯಿತು. ರಥಗಳ ಗರ್ಘರಗಳು, ಗಂಟೆಗಳ ಘಣಘಣಗಳು, ಶಂಖಗಳ ಝೋಂಕಾರ, ಆನೆಗಳ ಘೀಂಕಾರ, ಅಶ್ವಗಳ ಹ್ರೀಂಕಾರ, ಸೈನಿಕರ ಜಯಾಕಾರ, ಬೀಳುವವರ ಹಾಹಾಕಾರಗಳಿಂದ, ರಣದುಂದುಭಿಗಳಿಂದ, ಘೋರ ಘೋಷಣಗಳಿಂದ ರಣರಣಿಸಿತು ಭಾರತ ರಣರಂಗ.

ಒಂದು ಕಾಲದಲ್ಲಿ ಪರಶುರಾಮನು ಕ್ಷತ್ರಿಯರ ರಕ್ತದಿಂದ ಶಮಂತಕ ಪಂಚಕವೆಂಬ ಐದು ಮಡುಗಳನ್ನು ಆ ಕುರುಕ್ಷೇತ್ರದಲ್ಲಿ ನಿರ್ಮಿಸಿದ್ದನಷ್ಟೇ ? ಆ ಕುರುಕ್ಷೇತ್ರವು ಮತ್ತೊಮ್ಮೆ ರಕ್ತದ ಬಲಿ ಕೋರಿತ್ತು !

ದಿವ್ಯದೃಷ್ಟಿಯುಳ್ಳ ಸಂಜಯನು ಕುರುಕ್ಷೇತ್ರವು ಕಣ್ಣಿಗೆ ಕಟ್ಟುವಂತೆ, ಕುರುಡನಾದ ಧೃತರಾಷ್ಟ್ರನ ಮನೋನೇತ್ರಕ್ಕೆ ಸ್ಪಷ್ಟವಾಗಿ ಕಾಣುವಂತೆ ಆ ಯುದ್ಧವನ್ನು ಹೇಳಿ ತೋರಿಸುತ್ತಾ ಇದ್ದನು. ಅಂಧತ್ವದ ಮೇಲೆ ಪುತ್ರ ಪ್ರೇಮಾಂಧತೆಯೂ ಸೇರಿ, ದುರ್ಯೋಧನನನ್ನು ಸರಿಯಾಗಿ ತಡೆಯಲಾಗದ ಕೌರವ ಚಕ್ರವರ್ತಿ ಧೃತರಾಷ್ಟ್ರನು ಸಂಜಯನು ಹೇಳುವುದನ್ನು ಕೇಳುತ್ತಿದ್ದನು.

ಕಣ್ಣಿಗೆ ಬಟ್ಟೆ ಕಟ್ಟಿಕೊಂಡ ಮಹಾ ಪತಿವ್ರತೆ, ನೂರು ಮಕ್ಕಳ ತಾಯಿಯಾದ ಗಾಂಧಾರಿದೇವಿ, ಅವನ ಪಕ್ಕದಲ್ಲೇ ಕುಳಿತಿದ್ದಳು. ಸಂಜಯನು ಹೇಳುವುದನ್ನು ಅವರಿಬ್ಬರೂ ಆತ್ಮಾಸಕ್ತಿಯಿಂದ ಸುಮ್ಮನೆ ಕೇಳುತ್ತಿದ್ದರು.

ಪಾಂಡವ ಕೌರವರ ಬಲಾಬಲಗಳನ್ನು ಸಂಜಯನು ಹೇಳಿದನು.

ಉಭಯ ಪಕ್ಷಗಳ ವ್ಯತ್ಯಾಸವೇನೆಂದು ಧೃತರಾಷ್ಟ್ರನು ಕೇಳಿದನು.

ಸಂಖ್ಯೆಯಲ್ಲಿ ಪಾಂಡವರ ಬಲವು ಕೌರವರ ಬಲಕ್ಕಿಂತ ಕಡಿಮೆಯಾದರೂ, ತಮ್ಮ ಪಕ್ಷದಲ್ಲಿ ಕೃಷ್ಣನಿರುವುದರಿಂದ ಪಾಂಡವರ ಬಲವೇ ಹೆಚ್ಚಾಗಿರುವುದೆಂದು, ಕುರುಕ್ಷೇತ್ರದ ಯುದ್ಧವನ್ನು ವರ್ಣಿಸಿದನು ಸಂಜಯ.





# ವಿಚಿತ್ರ ವಿವಾಹ

ಖೈರವಾನ್ ನಗರವನ್ನು ಅಬ್ದುಲ್‌ನಯಾಜ್ ಎಂಬ ನವಾಬನು ಪಾಲಿಸಿಕೊಂಡಿದ್ದನು. ಅವನಿಗೆ ಒಬ್ಬಳು ಮಗಳ ಹೊರತು ಬೇರೆ ಮಕ್ಕಳಿರಲಿಲ್ಲ. ಆ ಕಾರಣದಿಂದ ನವಾಬನು ಅವಳಿಗೆ ಸಕಲ ವಿದ್ಯೆಗಳನ್ನೂ ಕಲಿಸಿದ್ದನು. ಬಾಲ್ಯದಿಂದಲೇ ಯುದ್ಧ ವಿದ್ಯೆಗಳನ್ನೂ ಕಲಿಯುತ್ತ ಬಂದ ಅವಳು, ಪ್ರೌಢೆಯಾದಾಗ ಗಂಡುಸರನ್ನೇ ಮೀರಿಸುವಷ್ಟು ಶೂರ ಕನ್ಯೆಯಾಗಿದ್ದಳು.

ನವಾಬನು ತನ್ನ ಆ ಮಗಳಿಗೆ ಮದುವೆ ಮಾಡಬೇಕೆಂದು ಪ್ರಯತ್ನಕ್ಕೆ ತೊಡಗಿದನು. ಅದನ್ನು ತಿಳಿದು ಅವನ ಮಗಳು, "ನನಗೆ ಯಾವನೋ ಒಬ್ಬ ರಾಜ್ಯದ ಪಾಲಕನ ಮಗನಾದ ಮಾತ್ರಕ್ಕೆ ಗಂಡನಾದರೆ ಸಾಕೆಂದುಕೊಂಡು ಮದುವೆ ಮಾಡಿಕೊಡುವಿರೆಂದು ಕಾಣುತ್ತದೆ, ಹಾಗೆ ಮಾಡಬೇಡಿರಿ ಅಪ್ಪಾ. ನನ್ನನ್ನು ಮದುವೆಯಾಗುವ ಯುವಕನು ನನ್ನ ಹಾಗೆಯೇ ಯುದ್ಧ ವಿದ್ಯೆಗಳಲ್ಲಿ ನಿಪುಣನಾಗಿರಬೇಕು. ಅಷ್ಟೇ ಅಲ್ಲ, ಅದರಲ್ಲಿ ನನ್ನನ್ನು ಮೀರಿಸುವವನಾಗಿಯೇ ಇರಬೇಕು. ಅಂಥವನು ಗಂಡನಾದರೇನೇ ನನಗೆ ಗೌರವ" ಎಂದಳು.

"ಅದೆಲ್ಲ ಸರಿಯೇ. ಅಂಥವನನ್ನು ಹುಡುಕಿ ಹಿಡಿಯುವುದು ಹೇಗೆ? ಕಂಡು ಹಿಡಿದರೂ ಅವನು ವಯಸ್ಸಿನಲ್ಲಿ ರೂಪದಲ್ಲಿ ನಿನಗೆ ಸರಿಯಾದವನಾಗಿರಬೇಕಷ್ಟೆ" ಎಂದು ರಾಜನು ಆಶ್ಚರ್ಯಪಡುತ್ತ ಕೇಳಿದನು.

"ಅದು ಬಹಳ ಸುಲಭವಾದ ಕೆಲಸ. ನನ್ನ ಜತೆಯಲ್ಲಿ ಅವನು ಕುದುರೇ ಸವಾರೀ, ಕತ್ತಿಯುದ್ಧ ಮೊದಲಾದ ವೀರ ವಿದ್ಯೆಗಳಲ್ಲಿ ಸ್ಪರ್ಧಿಸಬೇಕು. ಆಗ ಅವನ ಅರ್ಹತೆಗಳೆಲ್ಲಾ ನನಗೆ ತಿಳಿಯುತ್ತದೆ. ನನ್ನನ್ನು ಸೋಲಿಸಿದವನನ್ನು ಮದುವೆ ಮಾಡಿಕೊಳ್ಳುತ್ತೇನೆ" ಎಂದಳು ನವಾಬನ ಮಗಳು.

ನವಾಬನು ಒಂದೆರಡು ಕ್ಷಣ ಆಲೋಚನೆ ಮಾಡಿ, "ಹೀಗೆ ಡಂಗುರದ ಮೂಲಕ ತಿಳಿಸಲಿಕ್ಕೆ ಏನೂ ಕಷ್ಟವಿಲ್ಲ. ಆದರೆ, ತಮ್ಮ ಅದೃಷ್ಟ ಹೇಗಿದೆಯೋ ನೋಡಲಿಕ್ಕೆ ನಿನಗೆ ಹೊಂದಿಕೆ ಇಲ್ಲದ ಗುಣ ನಡತೆಯುಳ್ಳವರೆಲ್ಲ ಸ್ಪರ್ಧೆಗೆ ಬಂದರೆ ಏನು ಮಾಡುವುದು?" ಎಂದನು.

"ಅದನ್ನೂ ನಾನು ಆಲೋಚನೆ ಮಾಡಿದ್ದೇನೆ, ನನ್ನೊಂದಿಗೆ ಸ್ಪರ್ಧೆಗೆ ಬಿದ್ದು ಸೋತು ಹೋದವರ

ಅರೇಬಿಯಾ ಕಥೆ



ಆಯುಧಗಳೂ, ಕುದುರೆಯೂ ನನ್ನದಾಗುತ್ತವೆ. ಅಷ್ಟೇ ಅಲ್ಲ. ಸೋತವರ ಬೆನ್ನಿನ ಮೇಲೆ ನನ್ನ ಹೆಸರಿನ ಅಚ್ಚು ಮೂಡುವ ಹಾಗೆ ಕಾಯಿಸಿಡಿಸುತ್ತೇನೆ, ಇದು ಷರತ್ತು" ಎಂದಳು ನವಾಬನ ಮಗಳು ದಿಟ್ಟತನದಿಂದ.

ಇದನ್ನು ಒಪ್ಪಿ ಅಬ್ದುಲ್ ನಯಾಜ್ ನವಾಬನು, ತನ್ನ ಕುಮಾರಿ ಹೇಳಿದ ಹಾಗೆಯೇ ಡಂಗುರ ಸಾರಿಸಿದನು.

ಮುಂದೆ ಒಂದು ವಾರದೊಳಗೆ ರಾಜ್ಯದೊಳಗಿನ ರಾಜಕುಮಾರರು ಯರವಾನ್ ನಗರಕ್ಕೆ ಬಂದು, ನವಾಬನ ಮಗಳೊಂದಿಗೆ ಕುದುರೇ ಸವಾರಿ ಬಾಣ ಪ್ರಯೋಗ, ಕತ್ತಿ ಯುದ್ಧ ಮೊದಲಾದವುಗಳಲ್ಲಿ ಸ್ಪರ್ಧೆಗೆ ನಿಂತು ಪೂರ್ತಿ ಸೋತುಹೋದರು. ನವಾಬನ ಮಗಳು ಇಟ್ಟಿರುವ ಷರತ್ತಿನಂತೆ ಅವರ ಬೆನ್ನುಗಳ ಮೇಲೆ ತನ್ನ ಹೆಸರಿನ ಅಚ್ಚನ್ನು ಕಾಯಿಸಿಡಿಸಿದಳು.

ಒಂದು ದಿನ ಪರ್ಷಿಯಾ ರಾಜಕುಮಾರನು ಯರವಾನ್ ನಗರಕ್ಕೆ ಬಂದು ನವಾಬನನ್ನು ದರ್ಶನ ಮಾಡಿದನು. ನವಾಬನು ಅವನಿಗೆ ಗೌರವದ ಮರ್ಯಾದೆಗಳನ್ನೂ, ಉಪಚಾರಗಳನ್ನೂ ಮಾಡಿ, "ನೀನು ಬಹಳ ದೊಡ್ಡ ರಾಜ್ಯಕ್ಕೆ ರಾಜನಾಗಿ ಬರಲಿರುವವನು. ನನ್ನ ಕುಮಾರಿಯ ಷರತ್ತುಗಳು ಗೊತ್ತಿದೆಯಷ್ಟೆ? ಆ ಷರತ್ತಿಲ್ಲದಿದ್ದರೆ ಅವಳನ್ನು ನಿನಗೆ ಸಂತೋಷವಾಗಿ ಕೊಡುತ್ತಿದ್ದೆ. ಆದರೆ ನೀನು ಸ್ಪರ್ಧೆಗೆ ನಿಂತು ಪರಾಭವ ಹೊಂದುವುದು ನನಗಿಷ್ಟವಿಲ್ಲ. ಆದ್ದರಿಂದ ನಾನು ನಿನ್ನನ್ನು ಕೇವಲ ಅತಿಥಿಯಾಗಿ ಮಾತ್ರವೇ ನೋಡಬೇಕಾಗಿದೆ" ಎಂದನು ವಿಚಾರ ಭಾರದಿಂದ.

"ಇಷ್ಟು ದೂರ ಬಂದು ನಿಮ್ಮ ಕುಮಾರಿಯೊಂದಿಗೆ ಯುದ್ಧ ವಿದ್ಯೆಗಳಲ್ಲಿ ಸ್ಪರ್ಧೆಮಾಡದೆ ನಾನು ಹಿಂದಿರುಗಿ ಬಿಟ್ಟರೆ ನನಗೆ ಇನ್ನಿಷ್ಟು ಪರಾಭವವೇ ಸರಿ. ಅದೂ ನಡೆಯಲಿ" ಎಂದನು ಪರ್ಷಿಯಾ ರಾಜಕುಮಾರ.

ಇಷ್ಟವಿಲ್ಲದಿದ್ದರೂ ನವಾಬನು ಸ್ಪರ್ಧೆಗೆ ಏರ್ಪಾಡು ಮಾಡಿಸಿದನು. ನವಾಬನ ಕುಮಾರಿಯೂ, ಪರ್ಷಿಯಾ ರಾಜಕುಮಾರನೂ ಕುದುರೆಯ ಮೇಲೆ ಕತ್ತಿಯುದ್ಧವನ್ನು ಪ್ರಾರಂಭಿಸಿದರು. ಸ್ವಲ್ಪ ಹೊತ್ತಿನಲ್ಲೇ ನವಾಬನ ಮಗಳು, ತಾನು ಬಹು ನಿಪುಣನೂ ತನಗಿಂತಲೂ ಹೆಚ್ಚು ಚಾಲಾಕಿನವನೂ ಆದವನೊಂದಿಗೆ ಸ್ಪರ್ಧಿಸುತ್ತಿದ್ದೇನೆಂದು ಅರಿತಳು. ಪರ್ಷಿಯಾ ರಾಜಕುಮಾರನು ತನ್ನ ಕೈಯಲ್ಲಿದ್ದ ಕತ್ತಿಯನ್ನು ಹಾರಿಸಿ, ಕುದುರೆಯಿಂದ ತನ್ನನ್ನು ತಳ್ಳಿಹಾಕುವ ಅವಕಾಶಗಳು ಬಂದರೂ, ಅವನು ಹಾಗೆ ಮಾಡದೆ ಬಿಟ್ಟದ್ದು ತನ್ನ ಮೇಲಿನ ಗೌರವದಿಂದಲೇ ಎಂದೂ ತಿಳಿದುಕೊಂಡಳು.

ಆದರೂ ನವಾಬನ ಮಗಳಿಗೆ ಅಷ್ಟುಮಂದಿ ಪ್ರೇಕ್ಷಕರ ಇದಿರಿನಲ್ಲಿ ಸೋಲನ್ನು ಒಪ್ಪಿಕೊಳ್ಳಲು



ಅಭಿಮಾನವು ಬಿಡಲಿಲ್ಲ. ಅವಳು ಒಂದು ಉಪಾಯವನ್ನು ಆಲೋಚಿಸಿ. ಅಕಸ್ಮಾತ್ ತನ್ನ ಮುಖದ ಬುರುಕೆಯನ್ನು ತೊಲಗಿಸಿ ಪರ್ಷಿಯಾ ರಾಜಕುಮಾರನನ್ನು ನೋಡಿ ಒಂದು ಮುಗುಳು ನಗುವನ್ನು ಮಿನುಗಿಸಿದಳು.

ಮಿಂಚಿನಂತೆ ಫಕ್ಕನೆ ಹೊಳೆದ ಅವಳ ಅದ್ಭುತ ಸೌಂದರ್ಯವನ್ನು ನೋಡಿ ಪರ್ಷಿಯಾ ರಾಜಕುಮಾರನು ಕ್ಷಣಕಾಲ ಬೆರಗಾದನು. ಅವನು ಅಜಾಗ್ರತನಾಗಿದ್ದ ಅದೇ ಕ್ಷಣಗಳಲ್ಲಿ ನವಾಬನ ಮಗಳು ಅವನ ಕತ್ತಿ ಜಾರಿ ಬೀಳುವ ಹಾಗೆ ಹೊಡೆದು, ಅವನನ್ನೂ ಕುದುರೆಯಿಂದ ಕೆಳಕ್ಕೆ ಎಳೆದಳು.

ಕೆಳಗೆ ಬಿದ್ದ ಪರ್ಷಿಯಾ ರಾಜಕುಮಾರನು ಅವಮಾನದಿಂದ, ಅದನ್ನು ಮೀರಿದ ಕೋಪದಿಂದ ಎದ್ದು ನಿಲ್ಲುವಷ್ಟರಲ್ಲಿ, ನಾಲ್ವರು ನೀಗ್ರೋ ಗುಲಾಮ ಧಾಂಡಿಗರು ಅವನನ್ನು ಬಿಗಿಯಾಗಿ ಸುತ್ತಿ, ಅಲುಗಲಾಗದಂತೆ ಹಿಡಿದು, ಬೆನ್ನಿನ ಮೇಲೆ ನವಾಬನ ಮಗಳ ಹೆಸರಿನ ಅಚ್ಚು ಮುದ್ರೆಯನ್ನು ಕಾಯಿಸಿಟ್ಟರು.

ತುಂಬಿ ತುಳುಕುವ ಕೋಪದಿಂದ ಕುದಿಯುತ್ತ ರಾಜಕುಮಾರನು ಅಲ್ಲಿಂದ ಮಾತಾಡದೆ ಹೊರಟು ಹೋದನು. ಅವನಿಗೆ ನವಾಬನ ಕುಮಾರಿಗೆ ತಕ್ಕ ಹಾಗೆ ಪ್ರತೀಕಾರ ಮಾಡಬೇಕೆಂದು ಆವೇಶ ಉಂಟಾಯಿತು.

ಒಂದು ತಿಂಗಳು ಕಳೆದ ಮೇಲೆ ನವಾಬನ ಮಗಳು ಉದ್ಯಾನದಲ್ಲಿ ತನ್ನ ಗೆಳತಿಯರೊಂದಿಗೆ ತಿರುಗಿಕೊಂಡಿದ್ದಳು. ಅಲ್ಲೊಂದು ಕಡೆಯಲ್ಲಿ ಹಣ್ಣು ಮುದುಕನೊಬ್ಬನು ಕುಳಿತಿದ್ದನು. ಅವನ ಮುಂದೆ ಚಿಕ್ಕದೊಂದು ಶಿವಾಸೀ ಹರಡಿದ್ದಿತು. ಅದರ ಮೇಲೆ ಬೆಲೆ ಬಾಳುವ ರತ್ನ ಮಾಣಿಕ್ಯ ಬಂಗಾರದ ನಗಗಳು ಓರಣವಾಗಿಡಲ್ಪಟ್ಟಿದ್ದುವು. ನವಾಬನ ಮಗಳು ಆಶ್ಚರ್ಯಪಡುತ್ತ ಅವನ ಹತ್ತಿರ ಹೋಗಿ, "ಬಹಳ ಚೆನ್ನಾಗಿವೆ. ಇವನ್ನೆಲ್ಲಾ ಮಾರಲಿಕ್ಕೆ ತಂದಿದ್ದೀಏನು ? " ಎಂದು ಕೇಳಿದಳು.

"ಮಾರಲಿಕ್ಕಲ್ಲ, ಮದುವೆಗೆ. ನನ್ನನ್ನು ಮದುವೆಯಾಗುವವಳಿಗೆ ಇವನ್ನೆಲ್ಲಾ ಬಹುಮಾನವಾಗಿ ಕೊಡುತ್ತೇನೆ" ಎಂದನು ಆ ಮುದುಕ.

ಅವನ ಪ್ರತ್ಯುತ್ತರವನ್ನು ಕೇಳಿ ನವಾಬನ ಮಗಳೂ ಅವಳ ಗೆಳತಿಯರೂ ಬಿದ್ದು ಬಿದ್ದು ನಕ್ಕು, "ಇಷ್ಟು ಮುದುಕನಾಗಿ ಮದುವೆ ಮಾಡಿಕೊಳ್ಳುವ ಬುದ್ಧಿ ಏನಿದು ? " ಎಂದರು.

"ನನ್ನ ಚಪಲ ಬುದ್ಧಿ ನನ್ನದು ! ನನ್ನನ್ನು ಮದುವೆಯಾಗುವವಳು ಯಾವಾಗಲೂ ನನ್ನ ಹೆಂಡತಿಯಾಗಿರಬೇಕಾಗಿಲ್ಲ. ನನ್ನ ಜತೇಲಿ ಆ ಮರದ ಕೆಳಗಿರುವ ಕುದುರೇ ಮೇಲೆ ಒಂದು ನಿಮಿಷ ಕುಳಿತುಕೊಂಡರೇ ಸಾಕು. ಆಮೇಲೆ ನನ್ನ ಅವಳ ಮದುವೆ ರದ್ದಾಗಿ ಹೋಗುತ್ತದೆ. ಈ ಶಿವಾಸೀ ಮೇಲೆ ಇರುವುದೆಲ್ಲಾ ಅವಳಿಗೇ. ತೆಗೆದುಕೊಂಡು



ಹೋಗಬಹುದು" ಎಂದನು ಆ ಮುದುಕ. ಅವನ ಮಾತು ಕೇಳಿ ನವಾಬನ ಮಗಳು ವಿಚಿತ್ರ ನೋಡುವಂತೆ ಅವನನ್ನು ನೋಡಿ, ತನ್ನ ಗೆಳತಿಯ ಕಡೆಗೆ ತಿರುಗಿ, "ನಿಮ್ಮಲ್ಲಿ ಯಾವಳಾದರೂ ಈ ಸುಳ್ಳಿನ ವಿನೋದ ಮದುವೆಗೆ ಇಷ್ಟಪಡುವಿರಾ ?" ಎಂದು ಕೇಳಿದಳು.

"ಓ ! ನಮಗೆಲ್ಲಾ ಇಷ್ಟವೇ" ಎಂದರು ಎಲ್ಲರೂ. ಕ್ಷಣಮಾತ್ರದಲ್ಲಿ ಸಿಕ್ಕುವ ಧನವನ್ನು ನೋಡಿ, ಅವರಿಗೆ ಎಲ್ಲಿಲ್ಲದ ಆಶೆ ಉಂಟಾಗಿತ್ತು.

ನವಾಬನ ಮಗಳು ತನ್ನ ಗೆಳತಿಯರಲ್ಲಿ ಒಬ್ಬಳನ್ನು ಆರಿಸಿದಳು. ಮುದುಕನು ಚಪ್ಪಾಳೆ ತಟ್ಟಿದ ಕೂಡಲೇ ದೂರದಲ್ಲಿ ಮರದ ಕೆಳಗೆ ಕುಳಿತ್ತಿದ್ದ ಮುದಿ ಖಾಜೀಯೊಬ್ಬನು ಬಂದು, ಮುದಕನಿಗೂ ರಾಜಕುಮಾರಿಯ ಗೆಳತಿಗೂ ಮದುವೆ ಮಾಡಿಬಿಟ್ಟನು.

ಮುದುಕನು ಅವಳನ್ನು ಕರೆದುಕೊಂಡು ಹೋಗಿ ಕುದುರೆಯ ಮೇಲೆ ಕುಳ್ಳಿರಿಸಿ, ತಾನೂ ಏರಿ ಕುಳಿತು ಮರದ ಸುತ್ತಲೂ ಎರಡು ಸಾರಿ ತಿರುಗಿ ಕೆಳಕ್ಕೆ ಇಳಿದನು. ಕೂಡಲೇ ಖಾಜೀ, ಅವರ ಮದುದೆ ರದ್ದಾಗಿ ಹೋಯಿತೆಂದು ಸೋಡಾಚೀಟಿ ಮಂತ್ರ ಉಚ್ಚರಿಸಿ, "ಮದುವೆ ರದ್ದು" ಎಂದನು. ಆ ಗೆಳತಿ ಮುದುಕನ ಮುಂದಿದ್ದ ರತ್ನಮಾಣಿಕ್ಯ ನಗಗಳನ್ನೆಲ್ಲಾ ತೆಗೆದುಕೊಂಡು ಗುಂಪಿಗೆ ಬಂದು ಸೇರಿಕೊಂಡಳು.

ಇದೇ ವಿಧವಾಗಿ ನಾಲ್ಕು ದಿನಗಳವರೆಗೆ ಅದೇ ಹಣ್ಣು ಮುದುಕನು, ಅದೇ ರೀತಿಯಲ್ಲಿ ಆ ಉದ್ಯಾನಕ್ಕೆ ಬಂದು ನವಾಬನ ಮಗಳ ಗೆಳತಿಯ ರೊಬ್ಬೊಬ್ಬಳನ್ನೂ ಮದುವೆಯಾಗಿ, ಮರುನಿಮಿಷ ದಲ್ಲಿ ಖಾಜೀಯಿಂದ ರದ್ದುಪಡಿಸುತ್ತಿದ್ದನು. ಒಬ್ಬೊಬ್ಬಳಿಗೂ ಭರ್ತಿಯಾಗಿ ನಗನಟ್ಟುಗಳು ಸಿಕ್ಕಿದುವು.

ಐದನೇ ದಿನ ನವಾಬನ ಮಗಳು ಬೇಕೆಂತಲೇ ಒಬ್ಬಳೇ ಉದ್ಯಾನಕ್ಕೆ ಬಂದಳು. ಆ ಸಮಯದಲ್ಲಿ ಮುದುಕನು ತನ್ನ ಮುಂದೆ ತಿವಾಸೀ ಹರಡಿ ಅದರಲ್ಲಿ ಹರಡಿದ ವಸ್ತು ಒಡವೆಗಳನ್ನು ಪಿಳಿಪಿಳಿ ನೋಡಿಕೊಂಡಿದ್ದನು, ರಾಜಕುಮಾರಿಯ ಕಿವಿಗೆ ಬೀಳುವಂತೆ, ತನಗೆ ತಾನೆ ಹೇಳುವಂತೆ, "ಈ ದಿನ ಯಾವ ಅದೃಷ್ಟವಂತೆ ನನ್ನ ಹೆಂಡತಿಯಾಗುವಳೋ ತಿಳಿಯದು. ಇವತ್ತು ಇಷ್ಟು ದಿನಗಳ ಹಾಗಲ್ಲಪ್ಪಾ: ಇವೆಲ್ಲ ಒಂದು ಲಕ್ಷ ದೀನಾರಗಳಷ್ಟು ಬೆಲೆ ಬಾಳು ವಂಥವು. ಇಷ್ಟು ದೊಡ್ಡ ಅದೃಷ್ಟದವಳು ಇವತ್ತು ಯಾರೋ ? ಎಂಥವಳೋ ? ನೋಡೋಣ, ಬರಲಿ !" ಎಂದುಕೊಂಡನು.

ಅವನು ಹೇಳಿಕೊಂಡುದು ನಿಜವೇ. ಇಂದಿನ ನಗಗಳೆಲ್ಲ ಜಗಜಗನೆ ಹೊಳೆಯುತ್ತಿದ್ದುವು. ನವಾಬನ ಮಗಳು ಅದನ್ನು ನೋಡಿ ಬಹಳ ಕುತೂಹಲ ಗೊಂಡಳು. ಅವಳು ಮುದುಕನೊಂದಿಗೆ "ನಿನ್ನೊಂದಿಗೆ ಈ ಕ್ಷಣ ವಿವಾಹಕ್ಕೆ ನಾನು ಸಿದ್ಧಳೇ !" ಎಂದಳು. ಖಾಜೀ ಅವರಿಬ್ಬರಿಗೂ ಮದುವೆ ಮಾಡಿ ಆಚೆಗೆ

ಹೋದನು. ಮುದುಕನು ನವಾಬನ ಮಗಳೊಂದಿಗೆ ಕುದುರೆಯ ಮೇಲೆ ಕುಳಿತು, ಮರದ ಸುತ್ತಲೂ ಒಂದು ಸಾರಿ ತಿರಿಗಿ, ಕುದುರೆಯ ಬೆನ್ನು ತಟ್ಟಿದ್ದೇ ತಡ, ಕುದುರೆ ವೇಗವಾಗಿ ಓಡತೊಡಗಿತು. ನವಾಬನ ಮಗಳು ಏನೋ ಆಪತ್ತನ್ನು ಶಂಕಿಸಿಕೊಂಡು, ಕೂಗಲು ಬಾಯಿ ತೆರೆಯುವಷ್ಟರಲ್ಲಿ, ಮುದುಕನು ಅವಳ ಬಾಯಿಯನ್ನು ತನ್ನ ಅಂಗೈಯಿಂದ ಬಲವಾಗಿ ಮುಚ್ಚಿದನು. ನವಾಬನ ಮಗಳಿಗೆ ಭಯದಿಂದ ಬವಳಿ ಬಂದುಬಿಟ್ಟಿತು.

ಸ್ವಲ್ಪ ಹೊತ್ತಿನ ಮೇಲೆ ಅವಳಿಗೆ ಸ್ಪೃಹೆ ಬಂದಿತು. ಮುದುಕನು ಅವಳನ್ನು ಎವೆಯಿಕ್ಕದೆ ನೋಡುತ್ತ, "ನಾನು ನಿನ್ನನ್ನು ಶಾಸ್ತ್ರೋಕ್ತವಾಗಿ ಮದುವೆ ಮಾಡಿಕೊಂಡ ಗಂಡ!" ಎಂದನು.

"ಅದೇನೋ ನಿಜ. ಮದುವೆ ರದ್ದು ಮಾಡುವ ಖಾಜೀ ಎಲ್ಲಿ?" ಎಂದು ಪ್ರಶ್ನಿಸಿ ನವಾಬನ ಮಗಳು ಭೀತಿಯಿಂದ ಸುತ್ತಲೂ ನೋಡಿದಳು.

ಮುದುಕನು ಗಟ್ಟಿಯಾಗಿ ನಗುತ್ತ ಬೆಳ್ಳಗಿನ ತನ್ನ ಕೃತ್ರಿಮ ಗಡ್ಡ ಮೀಸೆಗಳನ್ನೂ, ತಲೆಯ ಮುಂಡಾಸನ್ನೂ ಎಳೆದು ದೂರ ಬಿಸುಟನು. ಆಗ ನವಾಬನ ಮಗಳಿಗೆ, ತನ್ನಿಂದ ಅವಮಾನಿಸಲ್ಪಟ್ಟ ಪರ್ಷಿಯಾ ರಾಜಕುಮಾರನೇ ಇವನೆಂದು ಗೊತ್ತಾಯಿತು.

"ಆ ದಿನ ನೀನು ನನ್ನನ್ನು ಮೋಸದಿಂದ ಸೋಲಿಸಿದವಳು. ಅಂತಹ ನಿನ್ನನ್ನು ಮೋಸದಿಂದಲೇ ಮದುವೆಯಾಗಬೇಕೆಂದು ಮಾಡಿದೆನು, ತಪ್ಪೇನಿಲ್ಲ ವಷ್ಟೆ?" ಎಂದು ಕೇಳಿದನು ರಾಜಕುಮಾರ.

ನವಾಬನ ಮಗಳು ನಾಚಿಕೆಯಿಂದ ತಲೆಯನ್ನು ತಿರುಗಿಸಿದಳು. ಅವಳು ತನ್ನನ್ನು ಮದುವೆಯಾಗಲು ಇಷ್ಟಪಡುವಳೆಂದು ತಿಳಿದು ಪರ್ಷಿಯಾ ರಾಜ ಕುಮಾರನು ಸಂತೋಷದಿಂದ, "ನಿನ್ನ ಹೆಸರು ನನ್ನ ಬೆನ್ನಿನ ಮೇಲೆ ಮಾಸದ ಪದ್ಧತಿಯಲ್ಲಿ ಹಾಕಿಸಿರುವಿ. ಅದು ನನಗೆ ಕಾಣುವುದಿಲ್ಲ. ನಿನ್ನ ಹೆಸರೂ, ರೂಪವೂ ನನ್ನ ಮನಸ್ಸಿನಲ್ಲಿ ಅದಕ್ಕಿಂತ ಮೊದಲೇ ಗುದ್ದಿದವಳು ನೀನು." ಎಂದನು ನಗುತ್ತ.

ನವಾಬನ ಮಗಳು ಮತ್ತಿಷ್ಟು ಲಜ್ಜೆಯಿಂದ ತಲೆ ತಗ್ಗಿಸಿದಳು.

ಆಮೇಲೆ ಅವರಿಬ್ಬರೂ ಪರ್ಷಿಯಾಕ್ಕೆ ಹೋಗಿ, ಕೂಡಿ ಬರೆದ ಪತ್ರವು ಯರವಾನ್ ನಗರದ ನವಾಬನಿಗೆ ದೂತನ ಮೂಲಕ ಸಿಕ್ಕಿತು. ಅವನು ತನ್ನ ಮಗಳಿಗೆ ಯೋಗ್ಯ ವರನೊಂದಿಗೆ ವಿಚಿತ್ರ ರೀತಿಯಲ್ಲಿ ಮದುವೆಯಾಗುವುದನ್ನು ನೆನೆದು ತುಂಬಾ ನಕ್ಕನು. ಅತ್ಯುತ್ಸಾಹದಿಂದ ತಾನೇ ಸ್ವತಃ ರಾಜ ಭವನದಲ್ಲಿ ಬಹು ವೈಭವದಿಂದ ಅವರ ಮದುವೆ ಮಾಡಿಸಿದನು.






## ೧೪

[ಕ್ರೂರನಾದ ಹಡಗಿನ ಸರಂಗನಿಂದ ಯಾವಾಗಲೂ ಪೀಡನೆಗೊಳಗಾಗಿದ್ದ ಗುಲಾಮರು, ಪಿಂಗಳನ ನಾಯಕತ್ವವನ್ನು ಒಪ್ಪಿದರು. ಗುಲಾಮರಿಂದ ಸರಂಗನ ವಧೆಯಾಯಿತು. ಅದೇ ಸಮಯದಲ್ಲಿ ಶತ್ರು ಹಡಗು ಅವರ ಹಡಗನ್ನು ಸಮೀಪಿಸಿತು. ಬೇರೆ ಉಪಾಯವಿಲ್ಲದೆ ಪಿಂಗಳನು ಶತ್ರು ಹಡಗಿಗೆ ತನ್ನ ಹಡಗು ಅಪ್ಪಳಿಸುವಂತೆ ಮಾಡಿದನು. ಎರಡು ಹಡಗುಗಳೂ ಒಡೆದು ಎಲ್ಲರೂ ಸಮುದ್ರಕ್ಕೆ ಬಿದ್ದರು. ಪಿಂಗಳನೂ ಸಮುದ್ರಕ್ಕೆ ಎಸೆಯಲ್ಪಟ್ಟನು.]

ಅಲುಗಾಡುವ ಬೆಟ್ಟಗಳಂತೆ ಎದ್ದೆದ್ದು ಮಗುಚಿ ಬೀಳುವ ತುಫಾನಿನ ಸಮುದ್ರದಲ್ಲಿ ಬಿದ್ದ ಪಿಂಗಳನು ತೆರೆಯೊಂದಿಗೆ ನೀರಿನಲ್ಲಿ ಮುಳುಗಿ ಹೋಗಿ, ಮತ್ತೆಲ್ಲೋ ಬಹುದೂರದಲ್ಲಿ ಮೇಲೆದ್ದನು. ಎರಡು ಹಡಗುಗಳೂ ಒಂದನ್ನೊಂದು ಅಪ್ಪಳಿಸಿಕೊಂಡುದರಿಂದ ಚೂರುಚೂರಾದ ಹಡಗಿನ ಮರದ ತುಂಡುಗಳೂ, ತೆರೆಚಾಪೆಗಳೂ, ಚೆಲ್ಲಾಚೆದರಾಗಿ ಮೂಲೆಗೊಂದೊಂದರಂತೆ ಸಮುದ್ರದ ತೆರೆಗಳೊಂದಿಗೆ ಎತ್ತೆತ್ತಲೋ ಹೋದುವು. ಮುಳುಗುವ ನಾವಿಕರ ಹಾಹಾಕಾರಗಳು ತುಫಾನಿನ ಹೋರ್ದನಿಯೊಂದಿಗೆ ಲೀನವಾಗಿ ಹೋಗುತ್ತಿದ್ದುವು. ಅಲ್ಲಿ ಎರಡು ಹಡಗುಗಳಿದ್ದುವೆಂದೇ ಗೊತ್ತಾಗದಂತಾಯಿತು. ಸಾಯುವ ಹೊತ್ತಿನಲ್ಲಿ ಶತ್ರು ಮಿತ್ರ ಭೇದವೆಲ್ಲಾ ಅಳಿಸಿ ಹೋಗಿ ಒಬ್ಬರನ್ನೊಬ್ಬರು ಅಪ್ಪಿಕೊಂಡು ಮುಳುಗಿದವರೆಷ್ಟೋ! ಗುಡ್ಡದಷ್ಟೆತ್ತರಕ್ಕೆ ಏರಿ ಏರಿ ಬೀಳುತ್ತಿದ್ದ ಅಲೆಗಳಲ್ಲಿ ಸಿಕ್ಕಿಕೊಂಡ ಪಿಂಗಳನು ದಿಕ್ಕಿಲುಮುಕ್ಕಿಲಾಗಿ ಚಡಪಡಿಸುತ್ತಿದ್ದನು. ತಾನು ಜೀವದಿಂದುಳಿದು ಭೂಪ್ರದೇಶವನ್ನು ಸೇರಲು ದೋಣಿಗೀಣಿ ಯಾವುದೂ ಇನ್ನಿಲ್ಲ. ಕೇವಲ ತೋಳುಗಳ ಬಲವನ್ನೇ ನಂಬಿಕೊಂಡು ಸ್ವಲ್ಪಹೊತ್ತು ಈಜಬಹುದು. ಆದರೆ



ಯಾವ ದಿಕ್ಕಿಗೆ ಹೋಗಬೇಕು ? ಭೂಮಿ ಯಾವ ದಿಕ್ಕಿನಲ್ಲಿದೆ ? ಅದಾವುದೂ ತಿಳಿಯುವಂತಿಲ್ಲ. ಅಸಲು ತನಗೆ ಸಮುದ್ರ ಪ್ರಯಾಣವೇ ಹೊಸದು. ತನ್ನ ಜತೆಯಲ್ಲಿದ್ದ ಅಷ್ಟೂ ಮಂದಿ ಏನಾದರು ? ಈ ಗತಿ ತನಗೆ ಒಬ್ಬನಿಗೆ ಮಾತ್ರ ಬಂದುದಲ್ಲವಷ್ಟೇ ? ತನ್ನ ಶತ್ರುಗಳಿಗೂ ಮಿತ್ರರಿಗೂ ಸಹ ಇದೇ ಗತಿಯಾಗಿದೆ. ಈ ಸಮಯದಲ್ಲಿ ಮಾನವರೆಲ್ಲಾ ಒಂದೇ ! ಬದುಕುವ ಆಶೆ ಇದ್ದರೆ ಮಾತ್ರ ಶತ್ರುಭಾವ ಮಿತ್ರಭಾವ ಎಲ್ಲವೂ. ಈಗ ಅವರೆಲ್ಲಿಯೋ ತಾನೆಲ್ಲಿಯೋ !

ಸಾಯುವವರೆಗೂ ಬದುಕುವ ಪ್ರಯತ್ನ ನಡೆದೇ ತೀರುತ್ತದೆ. ತಾನೀಗ ಯಾವ ದಿಕ್ಕಿಗೆ ಈಜುವುದೋ ಹೇಗೆ ತಿಳಿದೀತು ? ನೀರ ಮೇಲೆ ಬಂದಾಗಲೆಲ್ಲ ಪಿಂಗಳನು ಕಣ್ಣಿಗೆ ಕಂಡಷ್ಟು ದೂರದವರೆಗೆ ನೋಡಿದರೂ ಸಮುದ್ರದ ಹೊರತು ಮತ್ತೇನೂ ಕಾಣಿಸಲಿಲ್ಲ. ಎತ್ತಲೂ ಕದಲಬಾರದೆಂದುಕೊಂಡರೂ ತುಫಾನಿನ ಅಲೆಗಳು ಅವನನ್ನು ಎಲ್ಲೆಲ್ಲೋ ಸಾಗಿಸುತ್ತಲೇ ಇದ್ದುವು. ಅಷ್ಟುಮಂದಿ ತನ್ನೊಂಗಿದ್ದವರಲ್ಲಿ ಈಗ ಒಬ್ಬನಾದರೂ ತನ್ನ ಕೈಗೆ ಸಿಗಲಿಲ್ಲವೇಕೆ ? ಅವರನ್ನೆಲ್ಲ ಒಮ್ಮೊಗೇ ಸಮುದ್ರವು ನುಂಗಿತೆ ?

ಸುಮಾರು ಕಾಲುಗಂಟೆಯ ಹೊತ್ತಿನವರೆಗೂ ಪಿಂಗಳನು ಸಮುದ್ರದಲ್ಲಿ ಮುಳುಗುತ್ತ ತೇಲುತ್ತ ಅತ್ಯಂತ ಯಾತನೆಪಟ್ಟನು. ಇನ್ನು ತನ್ನ ಸಾವು ಬಹಳ ಹತ್ತಿರದಲ್ಲಿದೆ ಎಂಬ ನಿಶ್ಚಯಕ್ಕೂ ಬಂದನು. ಅವನ ತಾಯಿಯ ನೆನಪು ಬಂದಿತು. ಅವಳೆಲ್ಲಿರುವಳೋ, ಏನು ಮಾಡುವಳೋ ? ಅದೇ ಸಮಯದಲ್ಲಿ ಅವನ ಕೈಗೊಂದು ವಸ್ತು ತಟ್ಟಿತು. ಅದನ್ನು ಬಾಚಿ ಎರಡು ಕೈಗಳಿಂದಲೂ ಹಿಡಿದುಕೊಂಡನು.

ಪಿಂಗಳನ ತಾಯಿ ಆಗಾಗ ಹೇಳುವಂತೆ ಅದೃಷ್ಟ ದೇವತೆ ಅವನನ್ನು ಆಗಾಗ ನೋಡುತ್ತಲೇ ಇರುತ್ತಾಳೆಂದು ತೋರುತ್ತದೆ. ಈಗ ಅವನ ಕೈಗಳಿಗೆ ದೊರಕಿದ ವಸ್ತು ಒಂದು ಹಲಗೆಯ ತುಂಡು. ಒಡೆದ ಹಡಗಿನ ತುಂಡುಗಳಲ್ಲಿ ಅದೊಂದು. ಪಿಂಗಳನು ಮನಸ್ಸಿನಲ್ಲೇ ದೇವರಿಗೆ ಸಾವಿರ ನಮಸ್ಕಾರ ಮಾಡುತ್ತ, ಆ ಹಲಗೆಯನ್ನು ಎರಡು ಕೈಗಳಿಂದಲೂ ಎಳೆದು ಅದರ ಮೇಲೆ ಬೋರಲು ಬಿದ್ದನು. ದಣಿದು ಕಳಚಿ ಬೀಳುವಂತಾದ ತೋಳುಗಳಿಗೆ ಸ್ವಲ್ಪ ವಿಶ್ರಾಂತಿ ಸಿಕ್ಕಿದಂತಾಯಿತು. ಹೀಗೇ ಈಜಿಕೊಂಡು ಹೋದರೆ ಸಮುದ್ರದ ಅಲೆಗಳು ಯಾವುದೋ ತೀರಕ್ಕೆ ಸೇರಿಸಬಹುದೆಂದು ಒಂದು ನಂಬಿಗೆ ಬಂತು ಅವನಿಗೆ. ಮೈ ಕದಲಿಸಲಿಕ್ಕೂ ಆಗದಷ್ಟು ಹಸಿವೆಯ ಸಂಕಟ. ಚಳಿಯ ಬಾಧೆ, ಕೊರೆತ. ಎಲ್ಲದಕ್ಕೂ ಆ ಮರದ ತುಂಡೇ ಸರ್ವಸ್ವವೆಂಬಂತೆ ಅದನ್ನು ಬಿಗಿಯಾಗಿ ಅಪ್ಪಿಕೊಂಡನು.

ಮರದ ಹಲಗೆಯ ಮೇಲೆ ತೆರೆಗಳ ಇಷ್ಟದಂತೆ ತೇಲುತ್ತ ಮುಳುಗುತ್ತ ಹೋಗುತ್ತಿರಲು, ಪಿಂಗಳನು ಹಲಗೆಯ ಪಟ್ಟನ್ನು ಮಾತ್ರ ಬಿಡಲಿಲ್ಲ. ಕಣ್ಣುಗಳನ್ನು ಗಟ್ಟಿಯಾಗಿ ಮುಚ್ಚಿಕೊಂಡಿದ್ದನು. ತನ್ನ

ಸುತ್ತಲೂ ಏನು ನಡೆಯುತ್ತಿದೆಯೆಂಬುದು ಅವನಿಗೆ ತಿಳಿಯದಂತೆ ತಂದ್ರಾವಸ್ಥೆಗೆ ಜಾರಿದನು. ಕಣ್ಣು ಬಿಡಿಸಿ ನೋಡಿದರೆ, ತನ್ನ ಗತಿ ಎಂತಹುದೆಂದು ತಿಳಿದುಕೊಂಡು ಹೆದರಿ ಇರುವ ಬಲವೂ ಹೋಗಿ ಬಿಡುವುದೆಂಬ ಭಯ.

ಹಾಗೆ ಕೆಲವು ಗಂಟೆಗಳೇ ಕಳೆದುವು. ತುಫಾನಿನ ಅಬ್ಬರ ಶಾಂತವಾಯಿತು. ಎಲ್ಲಿಯೋ ಸಮುದ್ರ ದಾಚೆಗೆ ಸೂರ್ಯನೂ ಅಸ್ತಮಿಸಿದ್ದಾಯಿತು. ತನ್ನ ಸುತ್ತಲೂ ಕತ್ತಲೆ ಕವಿದ ಸಂಗತಿ ಕೂಡಾ ಪಿಂಗಳ ನಿಗೆ ಗೊತ್ತಾಗಲಿಲ್ಲ.

ಕಿವಿಯೊಳಗೆ ಎಂತಹುದೋ ಹೋ ೀ ರ್ದ ಧ್ವನಿ. ಸಮುದ್ರವೇ ತನ್ನ ಕಿವಿಗಳೊಳಗೆ ಹೊಕ್ಕಿರುವು ದೆಂದೂ, ತಾನು ಸಮುದ್ರದ ತಳಕ್ಕೆ ಇಳಿಯುತ್ತಿರುವೆ ನೆಂದೂ ತೋರುತ್ತಿತ್ತು. ಕಣ್ಣುಗಳನ್ನು ಗಟ್ಟಿಯಾಗಿ ಮುಚ್ಚಿಕೊಂಡಿದ್ದನು. ಬಾಯಾರಿಕೆಯಿಂದ ನಾಲಗೆ ಒಣಗುವಂತೆ ತೋರಿತು. ಅವನಿಗೆ ತಿಳಿಯದಂತೆಯೇ ಗಂಟಲಲ್ಲಿ ಸಮುದ್ರದ ಉಪ್ಪು ನೀರು ಇಳಿಯಿತು. ಅದರಿಂದ ಹೊಟ್ಟೆ ವಿಕಾರ ಮಾಡಿಕೊಂಡು ಬದಿಗೆ ತಿರುಗಿದನು. ಆದರೂ ಹಲಗೆಯನ್ನು ಬಿಡಲಿಲ್ಲ. ಹೊಟ್ಟೆಯಲ್ಲಿ ಹಸಿವೆಯ ಉರಿ. ಹಾಗೆಯೇ ಬವಳಿ ಬಂದಿತು. ಯಾವ ಶಬ್ದವೂ ಕೇಳದಂತಾಯಿತು. ಗಾಢ ನಿದ್ರೆ.

ಪಿಂಗಳನು ಕಣ್ಣುಗಳನ್ನು ಬಿಡಿಸಿ ನೋಡಿದಾಗ ಮಬ್ಬುಗಳೇನಿಲ್ಲದ ಪ್ರಶಾಂತವಾದ ನೀಲಾಕಾಶವು ಕಾಣಿಸಿತು. ಶರೀರದ ಸೊಂಟದ ಮೇಲು ಭಾಗ ವನ್ನು ಒಲೆಯೊಳಗಿಟ್ಟು ಸುಡುವ ಹಾಗೆ, ಕೆಂಡದ ಮೇಲೆ ಬಿದ್ದಿರುವ ಹಾಗೆ ಅನಿಸಿ ಪಟಪಟ ಅಡಿಸಿ ಕೊಂಡನು. ತೊಡೆಗಳೆರಡೂ ನೀರಿನಲ್ಲೇ ಇವೆ. ಮರಗಟ್ಟಿ ಹೋಗಿವೆ. ಸಮುದ್ರದ ಬದಿಯಲ್ಲಿ ಕೆಂಡ ವೆಲ್ಲಿಯದು? ಈ ಉರಿನೆಲಕ್ಕೆ ತನ್ನನ್ನು ಎಳೆದು ಹಾಕಿದವರು ಯಾರು?



ಅಂತೂ ತಾನು ಬದುಕಿರುವೆನೆಂದು ತಿಳಿದ ಕೂಡಲೇ ತನ್ನ ಪರಿಸ್ಥಿತಿ ವಿಚಿತ್ರವಾಗಿರುವಂತೆಯೂ ಅನಿಸಿತು. ಈ ಬಿಸಿ ಯಾವುದರದು? ತಾನಿರುವ ಸ್ಥಳ ಯಾವುದು? ಕಷ್ಟಪಡುತ್ತ ತಲೆಯನ್ನು ಸ್ವಲ್ಪ ಮಾತ್ರ ತಿರುಗಿಸಿ ನೋಡಿದನು.

ಕಂಡ ಪ್ರದೇಶವೆಲ್ಲಾ ಮರಳ ರಾಶಿಯೇ! ಹೊಯಿಗೆಯ ಗುಡ್ಡಗಳೇ! ಆ ಕ್ಷಣದಲ್ಲಿ ಅವನಿಗೆ ಪ್ರಾಣಭೀತಿಯೂ, ಸಾಯುವ ಹೊತ್ತಿಗೆ ಬರುವಂತಹ ದೊಡ್ಡ ಸತ್ವಶಕ್ತಿಯೂ ಬಂದು ಎದ್ದು ನಿಲ್ಲಲು ತುಳ್ಳಾಡಿದನು. ಕಾಲುಗಳಿಗೂ ರಕ್ತದ ಓಟ ಬಂದಿತು. ಆ ಕಾಲುಗಳಾಚೆಗೆ ಇರುವುದೆಲ್ಲಾ ಜಲಮಯ. ಅದು ಸಮುದ್ರವೇ ಆದರೂ ಸರೋವರದ ಹಾಗೆ ಪ್ರಶಾಂತವಾಗಿದೆ. ತೆರೆಗಳ ಹೊಯ್ದಾಟವಿಲ್ಲ. ಒದರಾಡುವ ಆ ಜಲರಾಶಿಯಿಂದ ಇಲ್ಲಿಗೆ ಹೇಗೆ ಬಂದೆನೆಂದು ಅವನಿಗೆ ತಿಳಿಯಲಿಲ್ಲ. ಆ ಪ್ರದೇಶವು ಎಂತಹುದೋ, ತಾನು ಎಂತಹ ಭೂಮಿಯ




ತೀರವನ್ನು ಸೇರಿದ್ದೇನೋ? ಒಂದು ಬದಿಯಲ್ಲಿ ಅಪಾರ ಜಲ ರಾಶಿಯಾದರೆ, ಇನ್ನೊಂದು ಬದಿಯಲ್ಲಿ ಮರಳುಗಾಡು. ಹೆಸರಿಗಾದರೂ ಮರಗಿಡಗಳ ಹಸಿರೇ ಇಲ್ಲ! ಬಿಸಿಲು ಕಾದು ಮರಳು ಕೆಂಡವಾಗಿತ್ತು. ಜಲರಾಶಿಯಲ್ಲಿ ಈಜಿಕೊಂಡಿದ್ದರೆ ಕೆಲವು ದಿನವಾದರೂ ಬದುಕಿರಬಹುದು. ಈ ಮರುಭೂಮಿಯಲ್ಲಿ ಕೆಲವು ಗಂಟೆಗಳೂ ಬದುಕಿರಲಾಗದೆ, ಒಲೆಗೆ ಬಿದ್ದ ಅಕ್ಕಳೆ ಯಾಗುವುದೇ ಸರಿ !

ಪಿಂಗಳನು ಆಲುತ್ತಮಾಲುತ್ತ ಕಾಲುಗಳನ್ನು ಎತ್ತಿ ಎತ್ತಿ ಹಾಕುತ್ತ ಮುಂದಕ್ಕೆ ನಡೆಯಲಾರಂಭಿಸಿದನು. ಸೂರ್ಯನ ಬಿಸಿ ಸರಳಿನಂತಹ ಕಿರಣಗಳು ಕಣ್ಣುಗಳ ಮೇಲೆ ಬೀಳದಂತೆ ಕೈಯನ್ನು ಅಡ್ಡವಾಗಿಟ್ಟುಕೊಂಡು, ದೂರದವರೆಗೆ ದೃಷ್ಟಿ ಹರಿಸಿ ನೋಡಿದನು.

ದೂರದಲ್ಲೊಂದು ಕಡೆ ಆಕಾಶದಲ್ಲಿ ಪಕ್ಷಿಗಳು ಎಗರಿಕೊಂಡಿರುವುದು ಕಂಡಿತು. ಅವು ಎತ್ತಲೋ ಹಾರಿಹೋಗುವ ಪಕ್ಷಿಗಳಾಗಿರಲಿಲ್ಲ. ಒಂದೇ ಪ್ರದೇಶದಲ್ಲಿ ವಲಯಾಕಾರವಾಗಿ ಸುತ್ತಿ ಸುತ್ತಿ ಹಾರುತ್ತಿದ್ದುವು. ಆಗಾಗ ಕೆಳಗೆ ಇಳಿದು ಮತ್ತೆ ಮೇಲೆ ಎಗುರುತ್ತಿದ್ದುವು. ಅಲ್ಲಿ ಏನೋ ಅವುಗಳ ಆಹಾರ ವಸ್ತುವಿರಬಹುದು. ಜನರಾರಾದರೂ ಇರಬಹುದೆ ?

ಪಿಂಗಳನಲ್ಲಿ ಆಶ್ಚರ್ಯದ ಜತೆಯಲ್ಲೇ ಎಂತಹುದೋ ಆಶೆಯ ಕುಡಿಯೂ ಹೊರಟಿತು. ಇನ್ನೂ ಮುಂದೆ ಹೋದಾಗ ಅವು ರಣ ಹದ್ದುಗಳೆಂದು ತಿಳಿಯಿತು.

ಹಾಗಾದರೆ ಅಲ್ಲಿ ಯಾವುದೋ ಪ್ರಾಣಿ ಸತ್ತಿರಬಹುದು. ಸ್ಮಶಾನವೋ ಏನೋ? ಪಕ್ಕದಲ್ಲಿ ಊರೂ ಇರಬಹುದು ಎಂದುಕೊಂಡನು. ಊರಿರುವಂತೆ ಏನೂ ಕಾಣದಿದ್ದರೂ ಅದೊಂದು ಆಶೆಯ ಊಹೆ ! ಈ ಬಗೆಯ ಆಲೋಚನೆಯಿಂದ ಮೈಗೆ ಶಕ್ತಿ ಬಂದಿತು. ಆ ಹದ್ದುಗಳು ತಿರುಗುವ ಪ್ರದೇಶವನ್ನೇ ಗುರಿ ಇಟ್ಟುಕೊಂಡು, ಸುಡುತ್ತಿರುವ ಮರಳಿನಲ್ಲಿ ಹಾಯ್ ಹೂಯ್ ಎನ್ನುತ್ತ ಅತ್ಯಂತ ಸಹನೆಯಿಂದ ನಡೆಯತೊಡಗಿದನು ಪಿಂಗಳ.

ಸ್ವಲ್ಪ ಹೊತ್ತಿಗೆ ಪಿಂಗಳನು ಆ ಪ್ರದೇಶವನ್ನು ಸಮೀಪಿಸಿದನು. ಆಗ ಅಲ್ಲಿ ಕೆಲವು ರಣ ಹದ್ದುಗಳು ಕೆಳಕ್ಕಿಳಿದು ಅಲ್ಲಿ ಬಿದ್ದಿರುವ ಯಾವುದೋ ಒಂದು ವಸ್ತುವನ್ನು ಮುತ್ತಿಕೊಂಡಿದ್ದುವು. ಅಯ್ಯೋ ! ಅದೊಂದು ಮನುಷ್ಯ ಶರೀರ ! ಆ ದೃಶ್ಯವನ್ನು ನೋಡಿ ಪಿಂಗಳನಿಗೆ ರೋಮಾಂಚನವಾಯಿತು.

ಕೈಕಾಲುಗಳನ್ನು ಹಗ್ಗದಿಂದ ಬಿಗಿಯಲ್ಪಟ್ಟ ಒಬ್ಬ ಮನುಷ್ಯನು ಅಲ್ಲಿದ್ದ ಒಂದು ಕಲ್ಲಿಗೆ ಆನಿಸಿದ ಹಾಗೆ ಕಟ್ಟಲ್ಪಟ್ಟು ಬಿದ್ದಿದ್ದನು. ಅವನಲ್ಲಿ ಯಾವ ಚಲನವೂ ಕಾಣುತ್ತಿರಲಿಲ್ಲ. ರಣ ಹದ್ದುಗಳು ಅವನನ್ನು ಕುಕ್ಕಿ ಕಿತ್ತು ತಿನ್ನಲು ಅಲ್ಲಿ ಕೂಡಿಕೊಳ್ಳುತ್ತಿದ್ದುವು. ಪಿಂಗಳನು ಬಾಗಿ ಅಲ್ಲಿ ಸಿಕ್ಕಿದ ಸಣ್ಣದೊಂದು ಕಲ್ಲಿನ ತುಂಡನ್ನು ಹೆಕ್ಕಿ ಆ ರಣ ಹದ್ದುಗಳ ಕಡೆಗೆ ಬಿಸುಟನು. ಕೂಡಲೆ

ಕೆಲವು ರಣ ಹದ್ದುಗಳು ರೆಕ್ಕೆಗಳನ್ನು ಟಪ್ಪ ಟಪ್ಪನೆ ಆಡಿಸಿ ಆಕಾಶಕ್ಕೆದ್ದುವು. ಕೆಲವು ಸ್ವಲ್ಪ ದೂರದವರೆಗೆ ಓಡಿ ತಮ್ಮ ಆಹಾರದ ಕಡೆಗೆ ನೋಡುತ್ತ ಅಲ್ಲೇ ನಿಂತುವು. ಆಕಾಶಕ್ಕೆ ಹಾರಿದ ಪಕ್ಷಿಗಳು ಮತ್ತೆ ಕೆಳಗೆ ಬಂದು ದೂರದಲ್ಲಿ ಎರಗಿದುವು.

ಪಿಂಗಳನು ಆ ಮನುಷ್ಯನ ಹತ್ತಿರ ಹೋದನು. ಅವನ ಕಣ್ಣುಗಳು ಮುಚ್ಚಿಕೊಂಡಿದ್ದುವು. ದೇಹದಲ್ಲಿ ಎಲ್ಲಿಯಾದರೂ ಪ್ರಾಣವಿರುವುದೋ ಎಂದು ಪಿಂಗಳನು ಅವನ ಎದೆಯ ಮೇಲೆ ಕೈಯಿಟ್ಟು ಪರೀಕ್ಷೆ ಮಾಡಿದನು. ಹದ್ದುಗಳಿಗೂ ಅದೇ ಸಂದೇಹ ಬಂದಿರಬಹುದು. ಅದುವರೆಗೂ ಅವನಲ್ಲಿ ಚಡಪಡಿಕೆ ಇದ್ದಿರಬೇಕು. ಆದರೆ ಈಗ ಯಾವ ಚಲನೆಯೂ ಕಾಣಲಿಲ್ಲ.



ಈ ಮರುಭೂಮಿಯಲ್ಲಿ ಯಾರು ಯಾವ ಕಾರಣಕ್ಕಾಗಿ ಈ ನಿರ್ಭಾಗ್ಯ ಮನುಷ್ಯನಿಗೆ ಇಂತಹ ಘೋರ ಮರಣ ಬರುವ ಹಾಗೆ ಮಾಡಿದರೋ ಎಂಬುದು ಪಿಂಗಳನ ಊಹೆಗೆ ನಿಲುಕಲಿಲ್ಲ. ಆ ನಿಮಿಷದಲ್ಲಿ ಅವನಿಗೆ ಹೊಸದೊಂದು ವಿಷಯ ಅರ್ಥವಾಯಿತು. ಜೀವನಾಧಾರವೇನೂ ಇಲ್ಲದೆ ಭಯಂಕರವಾಗಿಯೂ, ನಿರ್ಜನವಾಗಿಯೂ ಕಾಣುವ ಈ ಮರುಭೂಮಿಯಲ್ಲಿ ಸಮೀಪದಲ್ಲೆಲ್ಲಿಯೋ ಜನನಿವಾಸ ಸ್ಥಾನವಿರಲೇಬೇಕು. ಅವರು ಬಹಳ ಕ್ರೂರರಾಗಿರಲೂ ಬೇಕು !

ಅದು ಯಾವ ದಿಕ್ಕಿನಲ್ಲಿದೆಯೋ? ತಾನು ಯಾವ ಕಡೆಗೆ ಹೋಗಬೇಕು ? ಎಲ್ಲಕ್ಕೂ ಮೊದಲು ಬಾಯಾರಿಕೆ ತೀರಿಸಿಕೊಳ್ಳಬೇಕಾಗಿದೆ. ಆಮೇಲೆ ಏನಾದರೂ ತಿನ್ನಲೂ ಬೇಕು. ಇವುಗಳ ದಾರಿ ಹೇಗೆ ? ಸಿಕ್ಕುವ ಮನುಷ್ಯರು ದಯಾವಂತರಾಗಿದ್ದರೆ ತಾನೇ ಅದೆಲ್ಲಾ ?

ಇಂತಹ ಸಮಸ್ಯೆಯಲ್ಲಿ ಪಿಂಗಳನು ಮೇಲೆ ಕೆಳಗೆ ನೋಡಿಕೊಂಡಿದ್ದಾಗ, ದೂರದಲ್ಲಿ ಮರುಭೂಮಿಯಲ್ಲಿ ಪ್ರಯಾಣಿಸುತ್ತಿದ್ದ ಒಂಟೆ ಸವಾರರ ನಾಯಕನೊಬ್ಬನು, ತನ್ನ ದುರ್ಬೀನನ್ನು ಕಣ್ಣಿಗಿಟ್ಟುಕೊಂಡು, ಪಿಂಗಳನನ್ನೂ, ಸುತ್ತಲೂ ಹಾರುತ್ತಿದ್ದ ಹದ್ದುಗಳನ್ನೂ ನೋಡುತ್ತಿದ್ದನು.

ಮರುಕ್ಷಣದಲ್ಲೇ ಅವನ ಆಜ್ಞೆಯಂತೆ, ಒಂಟೆ ಪಟಾಲಂನವರು ಬಹು ವೇಗದಿಂದ ಓಡಿಕೊಂಡು ಪಿಂಗಳನಿರುವಲ್ಲಿಗೇ ಬರ ತೊಡಗಿದರು.

ದೂರದಲ್ಲಿ ಧೂಳೇಳುವುದನ್ನು ನೋಡಿ ಪಿಂಗಳನು ಮೊದಲು ಆಶ್ಚರ್ಯಪಟ್ಟು, ಅಷ್ಟರಲ್ಲಿ ಅದಕ್ಕೆ ಕಾರಣ ಗೊತ್ತಾಗಲು ಬೆರಗಾಗಿ ನಿಂತನು. ಒಂಟೆಗಳ ಸವಾರರ ಪಟಾಲಂ ಸ್ಪಷ್ಟವಾಗಿ ಕಾಣುವಾಗ ಮೊದಲು ಉತ್ಸಾಹವಾದರೂ ಬೆನ್ನಿಗೇ ಭಯವೂ ಹತ್ತಿತು. ಒಂದುವೇಳೆ ಆ ಬರುವವರು ಮರುಭೂಮಿಯ ಕಳ್ಳರಾಗಿದ್ದರೆ ?

ತನ್ನ ಹತ್ತಿರ ಅವರು ದೋಚಿಕೊಳ್ಳಲು ಏನೂ ಇಲ್ಲದಿದ್ದರೂ, ತನ್ನನ್ನೇ ದೋಚಿಕೊಂಡು ಗುಲಾಮ




ನಾಗಿ ಮಾಡುತ್ತಾರಲ್ಲ! ಎಲ್ಲಿಯಾದರೂ ಅಡಗಿಕೊಳ್ಳೋಣವೆಂದರೆ ಅಲ್ಲೆಲ್ಲೂ ಸ್ಥಳವೇ ಇಲ್ಲ. ಅದಕ್ಕೆ ಬೇಕಾದ ದೇಹ ಶಕ್ತಿಯೂ ತನಗಿಲ್ಲ. ಈಗ ತಾನಿರುವ ದೀನ ಸ್ಥಿತಿಯಲ್ಲಿ ಕಾಲೆತ್ತಿ ಮರಳಿನಲ್ಲಿ ನಡೆಯಲಿಕ್ಕಾದರೂ ಎಲ್ಲಿ ತ್ರಾಣವಿದೆ?

ಪಿಂಗಳನು ಇಂತಹ ಊಹಾಪೋಹಗಳಿಂದ ದೋಲಾಯಮಾನನಾಗಿರುವಾಗ, ಒಂಟೆ ಪಟಾಲಂ ಅಲ್ಲಿಗೆ ಬಂದೇ ಬಂದಿತು.

ನಾಯಕನು ಗಂಭೀರವಾದ ದೊಡ್ಡ ಕಂಠದಿಂದ "ಹೋ" ಎಂದ ಕೂಡಲೇ ರಣ ಹದ್ದುಗಳೆಲ್ಲ ಆಕಾಶಕ್ಕೆ ಹಾರಿಹೋದುವು. ಅವನು ಮಾಡಿದ ಗಂಭೀರ ಧ್ವನಿಯ ಆಜ್ಞೆಯಂತೆ ಪಟಾಲಂನವರು ತಮ್ಮ ತಮ್ಮ ವಾಹನಗಳಿಂದ ಇಳಿದು ಪಿಂಗಳನ ಸುತ್ತಲೂ ಕೋಟೆ ಕಟ್ಟಿ ನಿಂತರು. ಬೆಚ್ಚಿ ಬೆರಗಾಗಿ ಮೂಕನಂತಾದ ಪಿಂಗಳನನ್ನು, ಒಂಟೆ ಸವಾರರ ನಾಯಕನು ಸ್ವಲ್ಪ ಹೊತ್ತು ಪರೀಕ್ಷಿಸಿ ನೋಡಿ, "ಸುಳ್ಳು ಹೇಳಬೇಡ. ಯಾರು ನೀನು? ನೀನು ಹೆಗ್ಗಡೇಗೇ ಕಡೆಯವನೋ?" ಎಂದು ಕೇಳಿದನು.

ಅದಕ್ಕೇನೂ ಉತ್ತರ ಬಾರದಿರಲು ಸತ್ತ ಮನುಷ್ಯನ ಹತ್ತಿರ ಬಗ್ಗಿ ನೋಡಿ, ತನ್ನ ಅನುಚರರ ಕಡೆಗೆ ತಿರುಗಿ, "ಅರರೇ! ಇಲ್ಲಿ ಸತ್ತು ಬಿದ್ದಿರುವವನು ನಮ್ಮವನೇ! ಕೋಟೆಯ ಕಾವಲಿಗೆ ಕಳಿಸಿದ್ದ ಉಳಿದವರೆಲ್ಲ ಏನಾದರು? ಒಂದುವೇಳೆ ಕೋಟೆಯೇ ಹೆಗ್ಗಡೇಗೆಗಳ ವಶಕ್ಕೆ ಸಿಕ್ಕಿಹೋಗಿದೆಯೋ?" ಎಂದು ಹಳಹಳಿಸಿಕೊಂಡನು.

ಆಗ ಒಬ್ಬ ಪಟಾಲಂ ಮನುಷ್ಯ ತನ್ನ ಈಟಿಯನ್ನು ಪಿಂಗಳನ ಬೆನ್ನಿಗೆ ಆನಿಸಿ, "ನಿಜ ಹೇಳು. ನಿಮ್ಮ ನಾಯಕ ಹೆಗ್ಗಡೇಗೆ ಎಲ್ಲಿದ್ದಾನೆ?" ಎಂದು ಗದರಿಸಿ ಕೇಳಿದನು.

ಪಿಂಗಳನಿಗೆ ಆ ಪ್ರಶ್ನೆಯ ಅರ್ಥವೇ ತಿಳಿಯಲಿಲ್ಲ. ಬಹುಶಃ ಆ ಹೆಗ್ಗಡೇಗೆ ಎಂಬವನು ಕಳ್ಳರ ಗುಂಪಿನ ಮುಖಂಡನೋ ಏನೋ. ಹಾಗಾದರೆ ಇವರು ಯಾರಾಗಿರಬಹುದು? ರಾಜನ ಕಡೆಯವರೋ, ವ್ಯಾಪಾರದ ಪಯಣಿಗರೋ?

ಹೀಗೆ ಅನುಮಾನಿಸಿಕೊಂಡು ಪಿಂಗಳನು, "ನಾನೊಬ್ಬ ಒಂಟಿ ಆಳು ಮಾತ್ರ. ಯಾವ ಕಡೆಯವನೂ ನಾನಲ್ಲ. ಮಹಾ ಸಮುದ್ರದಲ್ಲಿ ತುಫಾನಿಗೆ ಸಿಕ್ಕಿ ನಾನಿದ್ದ ಹಡಗು ಒಡೆದು ಮುಳುಗಿಹೋಯಿತು. ದೇವರ ಕೃಪೆಯಿಂದ ನಾನೊಬ್ಬನೇ ಬದುಕಿ, ಓ ಅಲ್ಲಿ ದಡಕ್ಕೆ ಬಿದ್ದಿದ್ದೆ. ಏನೂ ತೋರದೆ ಇಲ್ಲಿಗೆ ಬಂದು, ಇಲ್ಲಿ ಸತ್ತಿರುವವನನ್ನು ನೋಡುತ್ತಾ ಇದ್ದೆ. ಈಗ ನೀವು ಬಂದಿರಿ. ಇದು ಯಾವ ದೇಶವೋ, ಈ ಮರುಭೂಮಿಯ ಹೆಸರೇನೋ? ನನಗೆ ಒಂದೂ ಗೊತ್ತಾಗುವುದಿಲ್ಲ. ನನ್ನ ಶರೀರ ಸ್ಥಿತಿಯನ್ನು ನೋಡಿದರೆ ನಾನು ಹೇಳಿದ್ದು ಸತ್ಯವೆಂದು ನಿಮಗೆ ತಿಳಿದೀತು. ಹೆಚ್ಚಿಗೆ ಮಾತಾಡುವ ಶಕ್ತಿಯೂ ನನಗಿಲ್ಲ" ಎಂದನು.



ಪಟಾಲಂ ನಾಯಕನು ಪಿಂಗಳನ ಮಾತು ಕೇಳಿ, ಮತ್ತೊಮ್ಮೆ ಅವನನ್ನು ಪರೀಕ್ಷಿಸಿ ನೋಡುತ್ತ, "ನೀನು ಹೇಳುವುದು ನಿಜವೇ ಆದರೆ ನಿನಗೆ ಯಾವ ಭಯವೂ ಇಲ್ಲ. ಒಂದುವೇಳೆ ಈ ವೇಷ ನಟನೆಗಳಿಂದ ಸುಳ್ಳು ಹೇಳಿದೆಯೆಂದಾದರೆ ನಿನ್ನನ್ನು ಚೂರು ಚೂರು ಮಾಡಿ, ಆ ರಣ ಹದ್ದುಗಳಿಗೆ ಎಸೆದು ಬಿಡುತ್ತೇವೆ. ನೀನು ಈಗ ಇರುವುದು ಆಫ್ರಿಕಾ ಸಮುದ್ರ ತೀರದಲ್ಲಿರುವ ಅರೇಬಿಯಾ ದೇಶಕ್ಕೆ ಸೇರಿದ ಪ್ರಾಂತ. ನಾನು ನವಾಬರ ಒಂಟೇ ಪಟಾಲಂ ನಾಯಕ. ಇನ್ನು ನಿನ್ನ ಹಡಗು ಸಮುದ್ರದಲ್ಲಿ ಮುಳುಗಿತೆಂದು ನೀನು ಹೇಳಿದ್ದೆಲ್ಲಾ ನಿಜವೇ ಏನು?" ಎಂದು ಕೇಳಿದನು.

ಅಂತೂ ಈಗ ಬಂದವರು ದಾರಿ ದೋಚುವವರಲ್ಲ ವೆಂದೂ, ನವಾಬನ ಸೈನಿಕರೆಂದೂ ಗೊತ್ತಾಗಿ ಪಿಂಗಳನಿಗೆ ಬಹಳ ಸಂತೋಷವೂ ಧೈರ್ಯವೂ ಉಂಟಾಯಿತು. ಆ ನವಾಬನೂ, ಈ ಸೈನಿಕರೂ ಎಂತಹರೇ ಆದರೂ ಪ್ರಸ್ತುತಕ್ಕೆ ತನಗೆ ಪ್ರಾಣ ಭೀತಿ ಇಲ್ಲವೆನಿಸಿತು. ತನ್ನ ತಲೆಯನ್ನೂ ಮೈಯನ್ನೂ, ಅಂಟಿ ಒಣಗಿ ಮರಗಟ್ಟಿದಂತಿದ್ದ ದುಸ್ತುಗಳನ್ನೂ ತೋರಿಸಿ ತಾನು ಸಮುದ್ರದಲ್ಲಿ ಮುಳುಗಿ ಬದುಕಿ ಬಂದವನೆಂಬುದನ್ನು ಒತ್ತೊತ್ತಿ ಹೇಳಿದನು. ಮುಂದಿನ ಪರಿಸ್ಥಿತಿಗಳಿಗೆ ತಕ್ಕ ಹಾಗೆ ಪ್ರವರ್ತಿಸಿಕೊಂಡು ಇರ ಬಹುದೆಂದು ನಂಬುಗೆಯುಂಟಾಯಿತು. ತನ್ನ ಪೂರ್ವ ಕಥೆಗಳೆಲ್ಲವನ್ನೂ, ತಾನು ಹಡಗಿನಲ್ಲಿ ಸೇರಿದ ಬಗೆ ಯನ್ನೂ ವಿವರಿಸಿ ಹೇಳಿದರೆ ಪಟಾಲಂ ನಾಯಕನಿಗೆ ನಂಬುಗೆ ಬಾರದಿರದು ಅಂದುಕೊಂಡನು. ಈಗಲೇ ಹೇಳಲು ಹಸಿವೆಯ ಸಂಕಟ ನಿಃಶಕ್ತತೆ.

ಸೈಗೆಯಿಂದಲೇ ಸ್ವಲ್ಪ ನೀರು ಕೇಳಿ ಕುಡಿದು ಪಿಂಗಳನು ತನ್ನ ಸಮಾಚಾರವನ್ನು ಮತ್ತಷ್ಟು ಹೇಳಿದನು. ತನ್ನ ಅಣ್ಣಂದಿರ ತಂತ್ರದಿಂದ ತಾನು ಹಡಗಿಗೆ ಸೇರಿದುದನ್ನೂ, ಆ ಸರಂಗನ ಕ್ರೌರ್ಯ ವನ್ನೂ, ಅವನ ಹಡಗಿಗೂ ಮತ್ತೊಂದು ಹಡಗಿಗೂ ತಾಕಲಾಟವಾದುದನ್ನೂ ವಿವರಿಸಿ ಹೇಳಿದನು. ಆಗ ಪಟಾಲಂ ನಾಯಕನು ತೃಪ್ತಿಯಿಂದ ಒಂದು ನಗು ವನ್ನು ತೋರಿಸಿ, "ಹಾಗಾದರೆ ನಿನ್ನ ಹಡಗನ್ನು ಅಟಕಾಯಿಸಿದ ಹಡಗಿನಲ್ಲಿ ಕೂಡಾ ಗುಲಾಮರು ಇದ್ದರೆಂದಾಯಿತು. ಅಲ್ಲವೇ?" ಎಂದನು.

"ಹೌದು. ಅದರಲ್ಲಿ ಸಂದೇಹವೇನಿಲ್ಲ. ಆ ಹಡಗಿನ ಸರಂಗನೊಂದಿಗೆ ನಾನು ರಾಜಿಯ ರಾಯಭಾರ ಮಾತಾಡುತ್ತಿದ್ದಾಗಲೇ ಅವನು ಹೇಳಿದ ಮಾತಿನಿಂದ ಅದು ನನಗೆ ಗೊತ್ತಾಯಿತು. ಅವನು ಕೂಡಾ ಗುಲಾಮರನ್ನು ಮಾರುವ ವ್ಯಾಪಾರಿಯೇ ಎಂದು." ಎಂದನು ಪಿಂಗಳ.

ಪಟಾಲಂ ನಾಯಕನು ಅದು ನಿಜವೆಂಬಂತೆ ತಲೆ ಯಾಡಿಸಿ, "ನನ್ನ ಹೆಸರು ಹಸನ್‌ಗೋರಿ. ನನ್ನ ಹಾಗೆ ನೀನು ಕೂಡಾ ಯುದ್ಧದಲ್ಲಿ ಅನೇಕಮಂದಿಗೆ ನಾಯಕತ್ವ ವಹಿಸಿದವನಾದುದನಿಂದ ನೀನೂ ನನಗೆ

ಸಮಾನನೆಂದೇ ಆಯಿತು. ಆದುದರಿಂದ ನೀನು, ನನ್ನನ್ನು ಈ ಹೆಸರು ಹೇಳಿಯೇ ಕರೆಯಬಹುದು, ನಾವು ಹೆಗ್ಗಡೇಗೆ ಎಂದು ಹೇಳಲ್ಪಡುವ ಒಬ್ಬಾನೊಬ್ಬ ಮರಳು ಗಾಡಿನ ಕಳ್ಳನನ್ನು ಹತಮಾಡಲು ಈ ಮರಳು ಗಾಡಿನ ಹೆದ್ದಾರಿಯಲ್ಲಿ ಗಸ್ತಿ ತಿರುಗುವವರು. ಅಲ್ಲಿ ಹೀಗೆ ಕೈಕಾಲು ಕಟ್ಟಲ್ಪಟ್ಟು ಸತ್ತವನು ನವಾಬರ ಸೈನ್ಯದೊಳಗಿನವವನೇ. ಇವನು ಮರುಭೂಮಿಯಲ್ಲಿರುವ ಇಫೀಖಿಲ್ಲಾವನ್ನು ರಕ್ಷಿಸಿಕೊಂಡಿದ್ದವರಲ್ಲಿ ಒಬ್ಬನು. ಇವನನ್ನು ಹೆಗ್ಗಡೇಗೆ ಹೇಗೆ ಹಿಡಿದನೋ ಗೊತ್ತಾಗುವುದಿಲ್ಲ. ನನ್ನ ಭಯವೇನೆಂದರೆ, ಹೇಗೋ ದುರದೃಷ್ಟದಿಂದಾಗಿ ಇಫೀಖಿಲ್ಲಾ ಕೂಡಾ ಹೆಗ್ಗಡೇಗೆಯ ವಶವಾಗಿ ಹೋಯಿತೋ ಅಂತ!" ಎಂದು ಅವನು ಸೈನಿಕರ ಕಡೆಗೆ ತಿರುಗಿ, "ಈ ಕ್ಷಣದಿಂದ ಇವನು ಕೂಡಾ ನಮ್ಮ ಪಟಾಲಂನ ಒಬ್ಬನೆಂದು ತಿಳಿಯಿರಿ. ಪಾಪ, ಇವನೀಗ ತುಂಬಾ ಹಸಿವೆಯಲ್ಲಿದ್ದಾನೆ. ಮೊದಲು ಆಹಾರ ಪಾನಿಯಗಳನ್ನು ಅಣಿಗೊಳಿಸಿರಿ. ಇವನು ಸುಧಾರಿಸಿಕೊಳ್ಳುವಂತೆ ನೋಡಿರಿ. ಗೌರವದಿಂದ ವರ್ತಿಸಿರಿ. ಆ ಮೇಲೆ ಉಳಿದ ಸಂಗತಿ" ಎಂದನು.

ಹಸನ್ ಗೋರಿಯ ಆ ಮಾತನ್ನು ಕೇಳಿದ ಕೂಡಲೇ ಪಿಂಗಳನ ಪ್ರಾಣಕ್ಕೆ ಅಮೃತ ಸುರಿದಂತಾಯಿತು. ಸೈನಿಕರು ಕೊಟ್ಟ ರೊಟ್ಟಿಗಳನ್ನು ತಿಂದು ತಣ್ಣಗಿನ ನೀರನ್ನು ಇಷ್ಟು ಕುಡಿದು ತೃಪ್ತಿಯಾಗಿ ತೇಗಿ, ಉತ್ಸಾಹದಿಂದ ಎದ್ದು ನಿಂತನು ಪಿಂಗಳ.

ಆಗ ಹಸನ್‌ಗೋರೀ ಒಂದು ಒಂಟೆಯನ್ನು ಅವನಿಗೆ ತೋರಿಸಿ, "ಇನ್ನು ಮೇಲೆ ಈ ಒಂಟೆ ನಿನ್ನದೇ ವಾಹನ. ಇಫೀಖಿಲ್ಲಾ ಕೋಟೆಯನ್ನು ಹೆಗ್ಗಡೇಗೆ ಆಕ್ರಮಿಸಿದ್ದಾನೋ ಎಂದು ನನಗೆ ಅನುಮಾನವಾಗಿದೆ" ಎಂದು ಹೇಳಿ, ಒಬ್ಬ ಸೈನಿಕನನ್ನು ನೋಡಿ, "ಆ ಶವವನ್ನು ಒಂದು ಒಂಟೆಯ ಮೇಲೆ ಹಾಕಿರಿ. ಖಿಲ್ಲೆಯ ಹತ್ತಿರ ಸಮಾಧಿ ಮಾಡೋಣ. ರಣಹದ್ದುಗಳಿಗೆ ಆಹಾರವಾಗುವಂತೆ ಬಿಡುವುದು ಧರ್ಮವಲ್ಲ" ಎಂದು ಅಪ್ಪಣೆ ಮಾಡಿದನು.

ಸ್ವಲ್ಪಹೊತ್ತಿಗೆ ಆ ಒಂಟೆ ಪಟಾಲಂ ಅಲ್ಲಿಂದ ಕದಲಿತು. ಮರಳುಗಾಡಿನಲ್ಲಿ ಆಗಾಗ ಅಲ್ಲಲ್ಲಿ ಕೆರಳಿಕೊಳ್ಳುತ್ತಿದ್ದ ತುಂಡು ತಫಾನು ಗಾಳಿಯ ನಡುವೆ ಪ್ರಯಾಣಿಸುತ್ತ, ಸೂರ್ಯನು ಪಶ್ಚಿಮ ದಿಕ್ಕಿಗೆ ಇಳಿಯುತ್ತಿರಲು ಪಟಾಲಂ ಇಫೀಖಿಲ್ಲಾದ ಸಮೀಪವನ್ನು ಸೇರಿತು. ಅದು ದೂರದಲ್ಲಿ ಮಸಕಾಗಿ ಕಾಣುತ್ತಿದ್ದಿತು. ಅಲ್ಲಿಯ ಪರಿಸರವೆಲ್ಲಾ ನಿರ್ಮಾನುಷ್ಯವಾಗಿ ಭಣ ಭಣಿಸಿಕೊಂಡಿತ್ತು.

ಹಸನ್‌ಗೋರಿ ಪಿಂಗಳನನ್ನು ಆಶ್ಚರ್ಯದಿಂದ ನೋಡುತ್ತ, ಹುಬ್ಬುಗಂಟು ಹಾಕಿಕೊಂಡು ಖಿಲ್ಲಾದ ಕಡೆಗೆ ಕೈ ತೋರಿಸಿದನು. —(ಇನ್ನೂ ಇದೆ)

